KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೯, ೨೦೧೧, (ಜ್ಯೇಷ್ಠ ೧೯, ಶಕ ವರ್ಷ ೧೯೩೩) | ಸಂಚಿಕೆ ೨೩ |
| --- | --- | --- |

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕೃಷಿ ಸಚಿವಾಲಯ

**ವಿಷಯ :** ಕೃಷಿ ವಲಯಕ್ಕೆ ಸಂಬಂಧಿಸಿದಂತೆ 2011–12ರ ಆಯವ್ಯಯ, ಭಾಗ–I ರಲ್ಲಿ ಒಂದು ಹೊಸ ಯೋಜನೆಯಾದ "ಸುವರ್ಣ ಭೂಮಿ" ಯೋಜನೆ ಅನುಷ್ಠಾನಗೊಳಿಸುವ ಬಗ್ಗೆ.

**ಪ್ರಸ್ತಾವನೆ :**

ಕೃಷಿ ವಲಯಕ್ಕೆ ಸಂಬಂಧಿಸಿದಂತೆ 2011–12 ರ ಆಯವ್ಯಯ, ಭಾಗ–I ರಲ್ಲಿ ಒಂದು ಹೊಸ ಯೋಜನೆಯಾದ "ಸುವರ್ಣ ಭೂಮಿ"ಯನ್ನು ಪ್ರಸ್ತಾಪಿಸಲಾಗಿದೆ. ಈ ವಿಸ್ತಾರವಾದ ಯೋಜನೆಯಡಿ ಪ್ರಸ್ತುತ ಸಾಲು 2011–12 ರಲ್ಲಿ 2 ಲಕ್ಷ ಪರಿಶಿಷ್ಟ ಜಾತಿ ಹಾಗೂ 1 ಲಕ್ಷ ಪರಿಶಿಷ್ಟ ವರ್ಗದ ರೈತ ಕುಟುಂಬಗಳು ಸೇರಿದಂತೆ ಒಟ್ಟು 10 ಲಕ್ಷ ರೈತ ಕುಟುಂಬಗಳ ಆರ್ಥಿಕ ಸ್ಥಿತಿಯನ್ನು ಅಭಿವೃದ್ಧಿಪಡಿಸಲಾಗುವುದು. ಯೋಜನೆಯ ಕಾರ್ಯ ನಿರ್ವಹಣಾ ವಿವರ ಈ ಕೆಳಕಂಡಂತಿದೆ.

(i) ಕಡಿಮೆ ಆದಾಯ ನೀಡುವ ಬೆಳೆಗಳ ಬದಲಿಗೆ ಹೆಚ್ಚು ಇಳುವರಿ ಮತ್ತು ಆದಾಯವನ್ನು ನೀಡುವ ಬೆಳೆಗಳನ್ನು ಬೆಳೆಯುವಂತೆ ಮತ್ತು ಚಟುವಟಿಕೆಗಳನ್ನು ಕೈಗೊಳ್ಳುವಂತೆ ಒಟ್ಟು 10 ಲಕ್ಷ ರೈತ ಕುಟುಂಬಗಳನ್ನು ಉತ್ತೇಜಿಸಿ, ಉತ್ಪಾದಕತೆ ಹೆಚ್ಚಿಸುವಿಕೆ ಹಾಗೂ ಸುಧಾರಿತ ಪದ್ಧತಿಗಳನ್ನು ಅಳವಡಿಸುವ ಮೂಲಕ ಅವರ ಜೀವನ ಮಟ್ಟವನ್ನು ಈ ಕೆಳಕಂಡ ಕ್ಷೇತ್ರಗಳಡಿಯಲ್ಲಿ ಸುಧಾರಿಸುವುದು.

ತೋಟಗಾರಿಕೆ – 2.5 ಲಕ್ಷ ರೈತ ಕುಟುಂಬಗಳು (ಮಾವು, ದ್ರಾಕ್ಷಿ, ದಾಳಿಂಬೆ, ನಿಂಬೆ ಬಾಳೆ, ಅನಾನಸ್, ಸಪೋಟ, ಪಪಾಯ ಮತ್ತು ಇತರೆ)

ರೇಷ್ಮೆ ಕೃಷಿ – 50,000 ರೈತ ಕುಟುಂಬಗಳು, ಜೈವಿಕ ಇಂಧನ – 1 ಲಕ್ಷ ರೈತ ಕುಟುಂಬಗಳು (ಹೊಂಗೆ, ಸೀಮಾರೂಬ ಮತ್ತು ಇತರೆ), ಸಾವಯವ ಕೃಷಿ – 2 ಲಕ್ಷ ರೈತ ಕುಟುಂಬಗಳು, ಹೆಚ್ಚು ಇಳುವರಿ ನೀಡುವ ಎಣ್ಣೆ ಕಾಳು ಮತ್ತು ದ್ವಿದಳ ಧಾನ್ಯಗಳು, ಬಿ.ಟಿ. ಹತ್ತಿ – 3 ಲಕ್ಷ, ಜೇನು ಸಾಕಣೆ – 50,000, ನೀರು ನಿಂತ ಪ್ರದೇಶ ಮತ್ತು ಸವಳು ಪ್ರದೇಶಗಳಲ್ಲಿ ಮೀನುಗಾರಿಕೆ – 50,000 ರೈತ ಕುಟುಂಬಗಳು.

(ii) ಪ್ರತಿ ರೈತನಿಗೆ 5 ಎಕರೆಗಿಂತ ಕಡಿಮೆ ಹೊಂದಿರುವ ಸಣ್ಣ ಮತ್ತು ಅತೀ ಸಣ್ಣ ರೈತರು ಈ ಯೋಜನೆಗೆ ಅರ್ಹರಾಗಿರುತ್ತಾರೆ. ಪ್ರತಿ ಕುಟುಂಬಕ್ಕೆ ಗರಿಷ್ಠ 2 ಎಕರೆಗೆ ರೂ. 10,000 (ಎರಡು ಕಂತುಗಳಲ್ಲಿ ಪ್ರತಿ ಕಂತಿಗೆ 5,000–00 ರೂ.ನಂತೆ) ಬ್ಯಾಂಕ್ ಮೂಲಕ ಸಹಾಯಧನವನ್ನು (ಗ್ರಾಂಟ್) ನೀಡಲಾಗುವುದು. ಈ ಪ್ರಯೋಜನವನ್ನು ಪ್ರತಿ ರೈತನಿಗೆ 2 ಎಕರೆಗೆ ಮಾತ್ರ ಸೀಮಿತಗೊಳಿಸಲಾಗುವುದು. ಒಂದು ವೇಳೆ ಹಿಡುವಳಿಯ ಗಾತ್ರ 2 ಎಕರೆಗಿಂತ ಕಡಿಮೆ ಇದ್ದಲ್ಲಿ, ಅದಕ್ಕೆ ಹಿಡುವಳಿಗೆ ಅನುಗುಣವಾಗಿ ಸಹಾಯಧನ (ಗ್ರಾಂಟ್) ನೀಡಲಾಗುವುದು.

(iii) ಈ ಯೋಜನೆಯು, ಪ್ರಮುಖವಾಗಿ ಖುಷ್ಕಿ ಜಮೀನು ಹಿಡುವಳಿ ರೈತರಿಗೆ ಸೀಮಿತವಾಗಿದ್ದು, ನೀರಾವರಿ – ಯೋಜನೆಗಳ ಅಚ್ಚುಕಟ್ಟು ಪ್ರದೇಶದ ರೈತರಿಗೆ ಅನ್ವಯಿಸುವುದಿಲ್ಲ.

ಈ ಯೋಜನೆಯ ಗರಿಷ್ಠ ಪ್ರಯೋಜನವನ್ನು ರೈತರು ಪಡೆಯುವಂತೆ ಮಾಡಲು, ಯೋಜನೆಯ ಅನುಷ್ಠಾನವನ್ನು ಮುಂಬರುವ ಮುಂಗಾರು ಋತುವಿನಿಂದ ಪ್ರಾರಂಭಿಸಲು ಪ್ರಸ್ತಾಪಿಸಲಾಗಿದೆ. ಸನ್ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 25–02–2011 ಮತ್ತು ದಿನಾಂಕ : 4–03–2011 ರಂದು ನಡೆದ ಸಭೆಗಳ, ಯೋಜನೆಯಡಿ ಆಯ್ಕೆಯಾದ ಪ್ರತಿ ಫಲಾನುಭವಿಯ ಬ್ಯಾಂಕ್ ಖಾತೆಗೆ ರೂ. 10,000/– ಸಹಾಯಧನವನ್ನು, ರೂ. 5000/– ರಂತೆ ಎರಡು ಕಂತುಗಳಲ್ಲಿ ಜಮಾ ಮಾಡಲು ನಿರ್ಧರಿಸಲಾಯಿತು. ಪ್ರಾರಂಭಿಕ ಚಟುವಟಿಕೆಗಳಾದ ಸಸಿ, ಸುಧಾರಿತ ತಂತ್ರಜ್ಞಾನ, ಬಿತ್ತನೆ ಬೀಜ ಮತ್ತಿತರ ಪರಿಕರಗಳನ್ನು ರೈತರು ಖರೀದಿಸಲು ಅನುವಾಗಲು, ಮೊದಲನೇ ಕಂತಿನ ರೂ. 5000/– ವನ್ನು ಅನುದಾನವಾಗಿ ಒದಗಿಸಲಾಗುವುದು ಮತ್ತು ಎರಡನೆಯ ಕಂತಿನ ರೂ. 5000/– ಹಣವನ್ನು ಮೊದಲನೇ ಕಂತಿನ ಬಿಡುಗಡೆ ಸಮಯದಲ್ಲಿ ಸೂಚಿಸಲಾದ ಷರತ್ತುಗಳ ಅನುಷ್ಠಾನದ ಪರಿಶೀಲನೆಯ ನಂತರ ಒದಗಿಸಲಾಗುವುದು. ಒಂದು ವೇಳೆ ಬಿಡುಗಡೆ ಮಾಡಲಾದ ಮೊದಲನೇ ಕಂತಿನ ಹಣವನ್ನು ರೈತ ಸದ್ಬಳಕೆ ಮಾಡದೇ ಇದ್ದಲ್ಲಿ, ಅಂತಹ ರೈತರಿಗೆ ಇನ್ನು ಮುಂದೆ ವಿಪತ್ತು ಪರಿಹಾರ ನಿಧಿ ಹೊರತುಪಡಿಸಿ, ಉಳಿದ ಯಾವುದೇ ಕೃಷಿ ವಲಯದ ಯೋಜನೆಗಳಲ್ಲಿ (ಕೃಷಿ, ತೋಟಗಾರಿಕೆ, ರೇಷ್ಮೆ, ಪಶು ಸಂಗೋಪನೆ ಮತ್ತು ಮೀನುಗಾರಿಕೆ) ಮುಂದಿನ ಮೂರು ವರ್ಷ ಅವಧಿಯವರೆವಿಗೆ ಪ್ರಯೋಜನ ಪಡೆಯಲು ಅನರ್ಹಗೊಳಿಸಲಾಗುವುದು.

ಯೋಜನೆಯ ಅನುಷ್ಠಾನಕ್ಕೆ 2011–12ರ ಆಯವ್ಯಯದಲ್ಲಿ ವಿವಿಧ ಇಲಾಖೆಗಳ ಆಯವ್ಯಯದ ಲೆಕ್ಕ ಶೀರ್ಷಿಕೆ ಅಡಿ ಒಟ್ಟು ರೂ. 1000/– ಕೋಟಿ ಅನುದಾನವನ್ನು ಒದಗಿಸಲಾಗಿದೆ. ಈ ಹಣವನ್ನು ಸಂಬಂಧಪಟ್ಟ ಇಲಾಖೆಯವರು ತಮಗೆ ಆಯವ್ಯಯದಲ್ಲಿ ನಿಗದಿಯಾಗಿರುವ ಗುರಿಯನ್ನು ನಿರ್ವಹಿಸಲು ಬೇಕಾದ ಹಣವನ್ನು ಜಿಲ್ಲಾಧಿಕಾರಿಗಳ ಮೂಲಕ ಬ್ಯಾಂಕಿಗೆ ಜಮಾ ಮಾಡಿಸುವ ಜವಾಬ್ದಾರಿ ನಿರ್ವಹಿಸಬೇಕಾಗಿರುತ್ತದೆ. ಪ್ರತಿ ಜಿಲ್ಲೆ ಮತ್ತು ತಾಲ್ಲೂಕುಗಳ ಗುರಿಯನ್ನು ಸಂಬಂಧಪಟ್ಟ ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಮೀನುಗಾರಿಕೆ ಮತ್ತು ರೇಷ್ಮೆ ಇಲಾಖೆಗಳು ನಿರ್ಧರಿಸಿ ಜಿಲ್ಲೆ ಮತ್ತು ತಾಲ್ಲೂಕುಗಳಿಗೆ ತಿಳಿಸುವುದು. ಫಲಾನುಭವಿಗಳನ್ನು ಆಯ್ಕೆ ಮಾಡಲು ಪ್ರತಿ ತಾಲ್ಲೂಕುಗಳನ್ನು "ಘಟಕ" ವೆಂದು ನಿರ್ಣಯಿಸಲಾಗಿದೆ. ಯೋಜನೆಯ ಮೇಲುಸ್ತುವಾರಿಗೆ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲಾಗುವುದು. ಪ್ರತಿ ಘಟಕದಡಿಯಲ್ಲಿ ಫಲಾನುಭವಿಗಳ ಆಯ್ಕೆಗೆ, ಸಂಬಂಧಿಸಿದ ಇಲಾಖೆ ಅಧಿಕಾರಿ, ಇತರರ ನೆರವಿನೊಂದಿಗೆ ಯೋಜನೆ ಅನುಷ್ಠಾನ ಮತ್ತು ಉಸ್ತುವಾರಿಗಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗುವುದು. ಪ್ರಸ್ತಾಪಿಸಲಾದ ಸಮಿತಿಯು ಈ ಕೆಳಕಂಡಂತಿದೆ.

(i) ಜಿಲ್ಲಾಧಿಕಾರಿ ........................................................................ ಅಧ್ಯಕ್ಷರು
(ii) ಮುಖ್ಯ ಕಾರ್ಯನಿರ್ವಹಣಾಧಿಕಾರಿ ........................................ ಸಹ ಅಧ್ಯಕ್ಷರು
(iii) ಜಂಟಿ ಕೃಷಿ ನಿರ್ದೇಶಕರು .................................................. ಸದಸ್ಯರು
(iv) ತೋಟಗಾರಿಕೆ ಉಪ ನಿರ್ದೇಶಕರು ...................................... ಸದಸ್ಯರು
(v) ಸಹಾಯಕ/ಉಪ ನಿರ್ದೇಶಕರು .......................................... ಸದಸ್ಯರು
ರೇಷ್ಮೆ ಮತ್ತು ಮೀನುಗಾರಿಕೆ ಇಲಾಖೆ
(vi) ಇ–ಆಡಳಿತದ ಪ್ರತಿನಿಧಿಗಳು ................................................ ಸದಸ್ಯರು
(vii) ಅಗತ್ಯತೆಯಂತೆ ಇತರೆ ಅಧಿಕಾರಿ/ಅಧಿಕಾರಿಗಳು

ಯೋಜನೆಯಡಿ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯನ್ನು ತ್ವರಿತಗೊಳಿಸಲು ಮತ್ತು ಸುಗಮವಾಗಿ ಅನುಷ್ಠಾನಗೊಳಿಸಲು ಪ್ರತಿ ತಾಲ್ಲೂಕು ಮಟ್ಟದಲ್ಲಿ ಇಂತಹದೇ ಆದ ಸಮಿತಿಯನ್ನು ಜಿಲ್ಲಾಧಿಕಾರಿಗಳು ರಚಿಸುವುದು ಮತ್ತು ಸಂಪೂರ್ಣ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ಆಯಾ ಇಲಾಖೆಗಳ ಮೂಲಕ ಮಾಡಿಸಿ, ಅದರ ಮೇಲ್ವಿಚಾರಣೆಗೆ ಕ್ರಮ ವಹಿಸತಕ್ಕದ್ದು.

ಯೋಜನೆಯ ಪರಿಣಾಮಕಾರಿ ಅನುಷ್ಠಾನ ಮತ್ತು ಉಸ್ತುವಾರಿಗೆ ಲೇಖನ ಸಾಮಗ್ರಿ, ಪ್ರವಾಸ, ರೈತ ಅನುವುಗಾರರಿಗೆ ಗೌರವ ಧನ ಇತರೆ ವೆಚ್ಚಗಳನ್ನು ಪೂರೈಸಲು, ಒಟ್ಟು ಅನುದಾನದ ಶೇ. 2ನ್ನು ಎಲ್ಲಾ ರೀತಿಯ ಸಾದಿಲ್ವಾರು ವೆಚ್ಚವನ್ನು ಭರಿಸಲು ಪ್ರತ್ಯೇಕವಾಗಿಡುವುದು. ಯೋಜನೆಯನ್ನು ಕಡಿಮೆ ಅವಧಿಯಲ್ಲಿ ಅನುಷ್ಠಾನಗೊಳಿಸಬೇಕಿರುವುದರಿಂದ, ಆದರೆ ವಿವಿಧ ಇಲಾಖೆಗಳಲ್ಲಿನ ಕ್ಷೇತ್ರ ಮಟ್ಟದ ಸಿಬ್ಬಂದಿಯವರ ಕೊರತೆ ಇರುವುದರಿಂದ, ಸಂಬಂಧಿಸಿದ ಇಲಾಖೆಗಳಿಗೆ, ಪ್ರತಿ 300 ಫಲಾನುಭವಿಗಳಿಗೊಬ್ಬರಂತೆ ಸ್ಥಳೀಯ ರೈತ ಅನುವುಗಾರರನ್ನು ನೇಮಿಸಿಕೊಳ್ಳಲು ಅನುಮತಿಯನ್ನು ನೀಡಲಾಗಿದೆ. ಅನುವುಗಾರರ ವೆಚ್ಚವನ್ನು ಭರಿಸಲು ಪ್ರತ್ಯೇಕಿಸಿದ ಶೇ. 2 ಸಾದಿಲ್ವಾರು ಅನುದಾನದಲ್ಲಿಯೇ ಬಳಸಿಕೊಳ್ಳಬಹುದಾಗಿದೆ.

ಮೂರು ಭಾಗದಲ್ಲಿರುವ ಒಂದು ಅರ್ಜಿ ನಮೂನೆಯನ್ನು ತಯಾರಿಸಿ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯ ರಾಜ್ಯ ಮಟ್ಟದ ಸಮಿತಿಯ ಅನುಮೋದನೆಯನ್ನು ಪಡೆದು ಎಲ್ಲಾ ಇಲಾಖೆಗಳಿಗೆ ಕಳುಹಿಸಿಕೊಡಲಾಗುವುದು. ನಿಗದಿತ ಗುರಿಗೆ ಮೀರಿ ಯಾವುದೇ ಇಲಾಖೆಯಲ್ಲಿ ಪ್ರತಿ ವರ್ಗ/ಜಾತಿಯ ಅರ್ಜಿಗಳು ಸ್ವೀಕರಿಸಲ್ಪಟ್ಟಿದ್ದಲ್ಲಿ, ತಾಲ್ಲೂಕು ಮಟ್ಟದಲ್ಲಿ 'ಲಾಟರಿ'ಯ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡುವುದು. ಯಾವುದೇ ಇಲಾಖೆಯಲ್ಲಿ ಸ್ವೀಕರಿಸಲಾದ ಅರ್ಜಿಗಳು ನಿಗದಿತ ಗುರಿಗಿಂತ ಕಡಿಮೆ ಸಂಖ್ಯೆಯಲ್ಲಿ ಸ್ವೀಕರಿಸಲ್ಪಟ್ಟಿದ್ದಲ್ಲಿ, ರಾಜ್ಯ ಮಟ್ಟದ ಸಮಿತಿಯು ಕುಂಠಿತವಾದ ಗುರಿಗಳನ್ನು ಹೆಚ್ಚಿನ ಬೇಡಿಕೆ ಇರುವ ಇತರೆ ಜಿಲ್ಲೆಗಳಿಗೆ/ಇತರೆ ಇಲಾಖೆಗಳಿಗೆ ವರ್ಗಾಯಿಸಲು ಅನುಮತಿ ನೀಡಬಹುದು. ಇದೇ ರೀತಿ ಜಿಲ್ಲಾ ಮಟ್ಟದ ಸಮಿತಿ/ಜಿಲ್ಲಾಧಿಕಾರಿಗಳು ಒಂದು ತಾಲ್ಲೂಕಿನಿಂದ ಇನ್ನೊಂದು ತಾಲ್ಲೂಕಿಗೆ ವರ್ಗಾಯಿಸಬಹುದು.

ಫಲಾನುಭವಿಗಳ ಆಯ್ಕೆಯಲ್ಲಿ ಆದ್ಯತೆಯಲ್ಲಿ ಕ್ರಮವಾಗಿ 1) ತೋಟಗಾರಿಕೆ 2) ರೇಷ್ಮೆ 3) ಮೀನುಗಾರಿಕೆ 4) ಜೈವಿಕ ಇಂಧನ 5) ಸಾವಯವ ಕೃಷಿ 6) ಕೃಷಿಗೆ ನೀಡಲಾಗುವುದು.

– ಸಾವಯವ ಕೃಷಿಗೆ ಸಂಬಂಧಿಸಿದಂತೆ ಯೋಜನೆಯನ್ನು ಜಾರಿ ಮಾಡುವ ಮತ್ತು ಉಸ್ತುವಾರಿ ಮಾಡುವುದು ಸಾವಯುವ ಕೃಷಿ ಮಿಷನ್ ಜವಾಬ್ದಾರಿಯಾಗಿರುತ್ತದೆ.

– ಜೈವಿಕ ಇಂಧನಕ್ಕೆ ಸಂಬಂಧಿಸಿದಂತೆ ಯೋಜನೆಯನ್ನು ಜಾರಿ ಮಾಡುವ ಮತ್ತು ಉಸ್ತುವಾರಿ ಮಾಡುವುದು ಜೈವಿಕ ಇಂಧನ ಕಾರ್ಯಪಡೆಯ ಜವಾಬ್ದಾರಿಯಾಗಿರುತ್ತದೆ.

ಈ ಯೋಜನೆಯನ್ನು ಉತ್ತಮ ರೀತಿಯಲ್ಲಿ ವಿನ್ಯಾಸಗೊಳಿಸಿ ಪರಿವೀಕ್ಷಣೆ ಮತ್ತು ಕಾರ್ಯಕ್ಷಮತೆ ಹೆಚ್ಚಿಸಲು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಂಸ್ಥೆಗಳನ್ನು ತೆಗೆದುಕೊಳ್ಳುವ ಬಗ್ಗೆ ಆಯವ್ಯಯ ಭಾಷಣದಲ್ಲಿ ಮಂಡಿಸಿರುವಂತೆ ಅಗತ್ಯ ಕ್ರಮ ಕೈಗೊಳ್ಳಲು ಮತ್ತು ಇದಕ್ಕಾಗಿ ಉದ್ದೇಶಿಸಿರುವ ರೂ. 20.00 ಕೋಟಿ ಹಣವನ್ನು ವಿನಿಯೋಗಿಸಿಕೊಳ್ಳಲಾಗುವುದು.

ದಿನಾಂಕ : 11–03–2011 ರಂದು ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸುವರ್ಣ ಭೂಮಿ ಅನುಷ್ಠಾನದ ಬಗ್ಗೆ ಚರ್ಚಿಸಿ, ಕೆಲವು ಪರಿಷ್ಕೃತ ಮಾರ್ಗಸೂಚಿಗೆ ಅನುಮೋದನೆ ನೀಡಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ : ಕೃತೋಇ/05/ಕೃಉಇ/2011, ಬೆಂಗಳೂರು, ದಿನಾಂಕ : 14ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 2011–12ನೇ ಸಾಲಿನಲ್ಲಿ ಹೊಸ ಯೋಜನೆಯಾದ ಸುವರ್ಣ ಭೂಮಿ ಯೋಜನೆಯನ್ನು ಲಗತ್ತಿಸಿರುವ ಮಾರ್ಗಸೂಚಿಯಂತೆ 2011–12ನೇ ಸಾಲಿನಲ್ಲಿ ಈ ಕೆಳಕಂಡ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಜಾರಿಗೊಳಿಸತಕ್ಕದ್ದು :

| | | |
|---|---|---|
| (i) | Suvarna Bhoomi-2401-00-800-1-66 (Agriculture Department) | Rs. 300 Crore |
| (ii) | Organic Farming – 2401-00-800-1-43 | Rs. 200 Crore |
| (iii) | Bio-fuels – 2401-00-800-1-46 | Rs. 100 Crore |
| (iv) | Horticulture – 2401-00-800-2-33 | Rs. 250 Crore |
| (v) | Fisheries – 2405-00-800-0-23 | Rs. 50 Crore |
| (vi) | Apiculture – 2851-00-200-0-01 | Rs. 6.25 Crore |
| (vii) | Sericulture – 2851-00-107-1-40 | Rs. 93.75 Crore |
| | **Total** | **Rs. 1000 Crore** |

2. (ಅ) ಕಡಿಮೆ ಆದಾಯ ನೀಡುವ ಬೆಳೆಗಳ ಬದಲಿಗೆ ಹೆಚ್ಚು ಇಳುವರಿ ಮತ್ತು ಆದಾಯವನ್ನು ನೀಡುವ ಬೆಳೆಗಳನ್ನು ಬೆಳೆಯುವಂತೆ ಮತ್ತು ಚಟುವಟಿಕೆಗಳನ್ನು ಕೈಗೊಳ್ಳುವಂತೆ ಒಟ್ಟು 10 ಲಕ್ಷ ರೈತ ಕುಟುಂಬಗಳನ್ನು ಉತ್ತೇಜಿಸಿ, ಉತ್ಪಾದಕತೆ ಹೆಚ್ಚಿಸುವಿಕೆ ಹಾಗೂ ಸುಧಾರಿತ ಪದ್ಧತಿಗಳನ್ನು ಅಳವಡಿಸುವ ಮೂಲಕ ಅವರ ಜೀವನ ಮಟ್ಟವನ್ನು ಈ ಕೆಳಕಂಡ ಕ್ಷೇತ್ರಗಳಡಿಯಲ್ಲಿ ಸುಧಾರಿಸುವುದು.

ತೋಟಗಾರಿಕೆ – 2.5 ಲಕ್ಷ ರೈತ ಕುಟುಂಬಗಳು (ಮಾವು, ದ್ರಾಕ್ಷಿ, ದಾಳಿಂಬೆ, ನಿಂಬೆ ಬಾಳೆ, ಅನಾನಸ್, ಸಪೋಟ, ಪಪಾಯ ಮತ್ತು ಇತರೆ)

ರೇಷ್ಮೆ ಕೃಷಿ 50,000 ರೈತ ಕುಟುಂಬಗಳು, ಜೈವಿಕ ಇಂಧನ–1 ಲಕ್ಷ ರೈತ ಕುಟುಂಬಗಳು (ಹೊಂಗೆ, ಸೀಮಾರೂಬ ಮತ್ತು ಇತರೆ), ಸಾವಯವ ಕೃಷಿ – 2 ಲಕ್ಷ ರೈತ ಕುಟುಂಬಗಳು, ಹೆಚ್ಚು ಇಳುವರಿ ನೀಡುವ ಎಣ್ಣೆ ಕಾಳು ಮತ್ತು ದ್ವಿದಳ ಧಾನ್ಯಗಳು, ಬಿ.ಟಿ. ಹತ್ತಿ–3 ಲಕ್ಷ ಜೇನು ಸಾಕಣೆ–50,000, ನೀರು ನಿಂತ ಪ್ರದೇಶ ಮತ್ತು ಸವಳು ಪ್ರದೇಶಗಳಲ್ಲಿ ಮೀನುಗಾರಿಕೆ – 50,000 ರೈತ ಕುಟುಂಬಗಳು.

(ಆ) ಪ್ರತಿ ರೈತನಿಗೆ 5 ಎಕರೆಗಿಂತ ಕಡಿಮೆ ಹೊಂದಿರುವ ಸಣ್ಣ ಮತ್ತು ಅತೀ ಸಣ್ಣ ರೈತರು ಈ ಯೋಜನೆಗೆ ಅರ್ಹರಾಗಿರುತ್ತಾರೆ. ಪ್ರತಿ ಕುಟುಂಬಕ್ಕೆ ಗರಿಷ್ಠ 2 ಎಕರೆಗೆ ರೂ. 10,000 (ಎರಡು ಕಂತುಗಳಲ್ಲಿ ಪ್ರತಿ ಕಂತಿಗೆ 5,000.00 ರೂ. ನಂತೆ) ಬ್ಯಾಂಕ್ ಮೂಲಕ ಸಹಾಯಧನವನ್ನು ನೀಡಲಾಗುವುದು. ಈ ಪ್ರಯೋಜನವನ್ನು ಪ್ರತಿ ರೈತನಿಗೆ 2 ಎಕರೆಗೆ ಮಾತ್ರ ಸೀಮಿತಗೊಳಿಸಲಾಗುವುದು. ಒಂದು ವೇಳೆ ಹಿಡುವಳಿಯ ಗಾತ್ರ 2 ಎಕರೆಗಿಂತ ಕಡಿಮೆ ಇದ್ದಲ್ಲಿ, ಅದಕ್ಕೆ ಹಿಡುವಳಿಗೆ ಅನುಗುಣವಾಗಿ ಸಹಾಯಧನ (ಗ್ರಾಂಟ್) ನೀಡಲಾಗುವುದು.

(ಇ) ಈ ಯೋಜನೆಯು, ಪ್ರಮುಖವಾಗಿ ಖುಷ್ಕಿ ಜಮೀನು ಹಿಡುವಳಿ ರೈತರಿಗೆ ಸೀಮಿತವಾಗಿದ್ದು, ನೀರಾವರಿ ಯೋಜನೆಗಳ ಅಚ್ಚುಕಟ್ಟು ಪ್ರದೇಶದ ರೈತರಿಗೆ ಅನ್ವಯಿಸುವುದಿಲ್ಲ.

3. ಈ ಯೋಜನೆಯ ಗರಿಷ್ಠ ಪ್ರಯೋಜನವನ್ನು ರೈತರು ಪಡೆಯುವಂತೆ ಮಾಡಲು, ಯೋಜನೆಯ ಅನುಷ್ಠಾನವನ್ನು ಮುಂಬರುವ ಮುಂಗಾರು ಋತುವಿನಿಂದ ಪ್ರಾರಂಭಿಸಲು ಪ್ರಸ್ತಾಪಿಸಲಾಗಿದೆ. ಸನ್ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 25–02–2011 ಮತ್ತು ದಿನಾಂಕ : 4–3–2011 ರಂದು ನಡೆದ ಸಭೆಯಲ್ಲಿ, ಯೋಜನೆಯಡಿ ಆಯ್ಕೆಯಾದ ಪ್ರತಿ ಫಲಾನುಭವಿಯ ಬ್ಯಾಂಕ್ ಖಾತೆಗೆ ರೂ. 10,000/– ಸಹಾಯಧನವನ್ನು ರೂ. 5000/– ರಂತೆ ಎರಡು ಕಂತುಗಳಲ್ಲಿ ಜಮಾ ಮಾಡಲು ನಿರ್ಧರಿಸಲಾಯಿತು. ಪ್ರಾರಂಭಿಕ ಚಟುವಟಿಕೆಗಳಾದ ಸಸಿ, ಸುಧಾರಿತ ತಂತ್ರಜ್ಞಾನ ಬಿತ್ತನೆ ಬೀಜ ಮತ್ತಿತರ ಪರಿಕರಗಳನ್ನು ರೈತರು ಖರೀದಿಸಲು ಅನುವಾಗಲು, ಮೊದಲನೇ ಕಂತಿನ ರೂ. 5000/–ವನ್ನು ಅನುದಾನವಾಗಿ ಒದಗಿಸಲಾಗುವುದು ಮತ್ತು ಎರಡನೆಯ ಕಂತಿನ ರೂ. 5000/– ಹಣವನ್ನು ಮೊದಲನೇ ಕಂತಿನ ಬಿಡುಗಡೆ ಸಮಯದಲ್ಲಿ ಸೂಚಿಸಲಾದ ಷರತ್ತುಗಳ ಅನುಷ್ಠಾನದ ಪರಿಶೀಲನೆಯ ನಂತರ ಒದಗಿಸಲಾಗುವುದು. ಒಂದು ವೇಳೆ ಬಿಡುಗಡೆ ಮಾಡಲಾದ ಮೊದಲನೇ ಕಂತಿನ ಹಣವನ್ನು ರೈತ ಸದ್ಬಳಕೆ ಮಾಡದೇ ಇದ್ದಲ್ಲಿ, ಅಂತಹ ರೈತರಿಗೆ ಇನ್ನು ಮುಂದೆ ವಿಪತ್ತು ಪರಿಹಾರ ನಿಧಿ ಹೊರತುಪಡಿಸಿ, ಉಳಿದ ಯಾವುದೇ ಕೃಷಿ ವಲಯದ ಯೋಜನೆಗಳಲ್ಲಿ (ಕೃಷಿ, ತೋಟಗಾರಿಕೆ, ರೇಷ್ಮೆ, ಪಶು ಸಂಗೋಪನೆ ಮತ್ತು ಮೀನುಗಾರಿಕೆ) ಮುಂದಿನ ಮೂರು ವರ್ಷ ಅವಧಿಯವರೆವಿಗೆ ಪ್ರಯೋಜನ ಪಡೆಯಲು ಅನರ್ಹಗೊಳಿಸಲಾಗುವುದು.

4. ಯೋಜನೆಯ ಅನುಷ್ಠಾನಕ್ಕೆ 2011–12ರ ಆಯವ್ಯಯದಲ್ಲಿ ವಿವಿಧ ಇಲಾಖೆಗಳ ಆಯವ್ಯಯದ ಲೆಕ್ಕ ಶೀರ್ಷಿಕೆ ಅಡಿ ಒಟ್ಟು ರೂ. 1000/– ಕೋಟಿ ಅನುದಾನವನ್ನು ಒದಗಿಸಲಾಗಿದೆ. ಈ ಹಣವನ್ನು ಸಂಬಂಧಪಟ್ಟ ಇಲಾಖೆಯವರು ತಮಗೆ ಆಯವ್ಯಯದಲ್ಲಿ ನಿಗದಿಯಾಗಿರುವ ಗುರಿಯನ್ನು ನಿರ್ವಹಿಸಲು ಬೇಕಾದ ಹಣವನ್ನು ಜಿಲ್ಲಾಧಿಕಾರಿಗಳ ಮೂಲಕ ಬ್ಯಾಂಕಿಗೆ ಜಮಾ ಮಾಡಿಸುವ ಜವಾಬ್ದಾರಿ ನಿರ್ವಹಿಸಬೇಕಾಗಿರುತ್ತದೆ. ಪ್ರತಿ ಜಿಲ್ಲೆ ಮತ್ತು ತಾಲ್ಲೂಕುಗಳ ಗುರಿಯನ್ನು ಸಂಬಂಧಪಟ್ಟ ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಮೀನುಗಾರಿಕೆ ಮತ್ತು ರೇಷ್ಮೆ ಇಲಾಖೆಗಳು ನಿರ್ಧರಿಸಿ ಜಿಲ್ಲೆ ಮತ್ತು ತಾಲ್ಲೂಕುಗಳಿಗೆ ತಿಳಿಸುವುದು. ಫಲಾನುಭವಿಗಳನ್ನು ಆಯ್ಕೆ ಮಾಡಲು ಪ್ರತಿ ತಾಲ್ಲೂಕುಗಳನ್ನು **"ಘಟಕ"** ವೆಂದು ನಿರ್ಣಯಿಸಲಾಗಿದೆ. ಯೋಜನೆಯ ಮೇಲುಸ್ತುವಾರಿಗೆ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮಿತಿಯನ್ನು ರಚಿಸಲಾಗುವುದು. ಪ್ರತಿ ಘಟಕದಡಿಯಲ್ಲಿ ಫಲಾನುಭವಿಗಳ ಆಯ್ಕೆಗೆ, ಸಂಬಂಧಿಸಿದ ಇಲಾಖೆ ಅಧಿಕಾರಿ, ಇತರರ ನೆರವಿನೊಂದಿಗೆ ಯೋಜನೆ ಅನುಷ್ಠಾನ ಮತ್ತು ಉಸ್ತುವಾರಿಗಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ.

(i) ಜಿಲ್ಲಾಧಿಕಾರಿ ........................................................................ ಅಧ್ಯಕ್ಷರು

(ii) ಮುಖ್ಯ ಕಾರ್ಯನಿರ್ವಹಣಾಧಿಕಾರಿ ...................................... ಸಹ ಅಧ್ಯಕ್ಷರು

(iii) ಜಂಟಿ ಕೃಷಿ ನಿರ್ದೇಶಕರು .................................................. ಸದಸ್ಯರು

(iv) ತೋಟಗಾರಿಕೆ ಉಪ ನಿರ್ದೇಶಕರು ...................................... ಸದಸ್ಯರು

(v) ಸಹಾಯಕ/ ಉಪ ನಿರ್ದೇಶಕರು ......................................... ಸದಸ್ಯರು
ರೇಷ್ಮೆ ಮತ್ತು ಮೀನುಗಾರಿಕೆ ಇಲಾಖೆ

(vi) ಇ–ಆಡಳಿತದ ಪ್ರತಿನಿಧಿಗಳು ................................................ ಸದಸ್ಯರು

(vii) ಅಗತ್ಯತೆಯಂತೆ ಇತರೆ ಅಧಿಕಾರಿ/ಅಧಿಕಾರಿಗಳು

5. ಯೋಜನೆಯಡಿ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆಯನ್ನು ತ್ವರಿತಗೊಳಿಸಲು ಮತ್ತು ಸುಗಮವಾಗಿ ಅನುಷ್ಠಾನಗೊಳಿಸಲು ಪ್ರತಿ ತಾಲ್ಲೂಕು ಮಟ್ಟದಲ್ಲಿ ಇಂತಹದೇ ಆದ ಸಮಿತಿಯನ್ನು ಜಿಲ್ಲಾಧಿಕಾರಿಗಳು ರಚಿಸುವುದು ಮತ್ತು ಸಂಪೂರ್ಣ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ಆಯಾ ಇಲಾಖೆಗಳ ಮೂಲಕ ಮಾಡಿಸಿ, ಅದರ ಮೇಲ್ವಿಚಾರಣೆಗೆ ಕ್ರಮ ವಹಿಸತಕ್ಕದ್ದು.

6. ಯೋಜನೆಯ ಪರಿಣಾಮಕಾರಿ ಅನುಷ್ಠಾನ ಮತ್ತು ಉಸ್ತುವಾರಿಗೆ ಲೇಖನ ಸಾಮಗ್ರಿ, ಪ್ರವಾಸ, ರೈತ ಅನುವುಗಾರರಿಗೆ ಗೌರವ ಧನ ಇತರೆ ವೆಚ್ಚಗಳನ್ನು ಪೂರೈಸಲು, ಒಟ್ಟು ಅನುದಾನದ ಶೇ. 2ನ್ನು ಎಲ್ಲಾ ರೀತಿಯ ಸಾದಿಲ್ವಾರು ವೆಚ್ಚವನ್ನು ಭರಿಸಲು ಪ್ರತ್ಯೇಕವಾಗಿಡುವುದು. ಯೋಜನೆಯನ್ನು ಕಡಿಮೆ ಅವಧಿಯಲ್ಲಿ ಅನುಷ್ಠಾನಗೊಳಿಸಬೇಕಿರುವುದರಿಂದ, ಆದರೆ ವಿವಿಧ ಇಲಾಖೆಗಳಲ್ಲಿನ ಕ್ಷೇತ್ರ ಮಟ್ಟದ ಸಿಬ್ಬಂಧಿಯವರ ಕೊರತೆ ಇರುವುದರಿಂದ, ಸಂಬಂಧಿಸಿದ ಇಲಾಖೆಗಳಿಗೆ, ಪ್ರತಿ 300 ಫಲಾನುಭವಿಗಳಿಗೊಬ್ಬರಂತೆ ಸ್ಥಳೀಯ ರೈತ ಅನುವುಗಾರರನ್ನು ನೇಮಿಸಿಕೊಳ್ಳಲು ಅನುಮತಿಯನ್ನು ನೀಡಲಾಗಿದೆ. ಅನುವುಗಾರರ ವೆಚ್ಚವನ್ನು ಭರಿಸಲು ಪ್ರತ್ಯೇಕಿಸಿದ ಶೇ. 2 ಸಾದಿಲ್ವಾರು ಅನುದಾನದಲ್ಲಿಯೇ ಬಳಸಿಕೊಳ್ಳಬಹುದಾಗಿದೆ.

7. ಮೂರು ಭಾಗದಲ್ಲಿರುವ ಒಂದು ಅರ್ಜಿ ನಮೂನೆಯನ್ನು ತಯಾರಿಸಿ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯ ರಾಜ್ಯ ಮಟ್ಟದ ಸಮಿತಿಯ ಅನುಮೋದನೆಯನ್ನು ಪಡೆದು ಎಲ್ಲಾ ಇಲಾಖೆಗಳಿಗೆ ಕಳುಹಿಸಿಕೊಡಲಾಗುವುದು. ನಿಗದಿತ ಗುರಿಗೆ ಮೀರಿ ಯಾವುದೇ ಇಲಾಖೆಯಲ್ಲಿ ಪ್ರತಿ ವರ್ಗ/ಜಾತಿಯ ಅರ್ಜಿಗಳು ಸ್ವೀಕರಿಸಲ್ಪಟ್ಟಿದ್ದಲ್ಲಿ, ತಾಲ್ಲೂಕು ಮಟ್ಟದಲ್ಲಿ 'ಲಾಟರಿ'ಯ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡುವುದು. ಯಾವುದೇ ಇಲಾಖೆಯಲ್ಲಿ ಸ್ವೀಕರಿಸಲಾದ ಅರ್ಜಿಗಳು ನಿಗದಿತ ಗುರಿಗಿಂತ ಕಡಿಮೆ ಸಂಖ್ಯೆಯಲ್ಲಿ ಸ್ವೀಕರಿಸಲ್ಪಟ್ಟಿದ್ದಲ್ಲಿ, ರಾಜ್ಯ ಮಟ್ಟದ ಸಮಿತಿಯು ಕುಂಠಿತವಾದ ಗುರಿಗಳನ್ನು ಹೆಚ್ಚಿನ ಬೇಡಿಕೆ ಇರುವ ಇತರೆ ಜಿಲ್ಲೆಗಳಿಗೆ/ಇತರೆ ಇಲಾಖೆಗಳಿಗೆ ವರ್ಗಾಯಿಸಲು ಅನುಮತಿ ನೀಡಬಹುದು. ಇದೇ ರೀತಿ ಜಿಲ್ಲಾ ಮಟ್ಟದ ಸಮಿತಿ/ಜಿಲ್ಲಾಧಿಕಾರಿಗಳು ಒಂದು ತಾಲ್ಲೂಕಿನಿಂದ ಇನ್ನೊಂದು ತಾಲ್ಲೂಕಿಗೆ ವರ್ಗಾಯಿಸಬಹುದು.

8. ಫಲಾನುಭವಿಗಳ ಆಯ್ಕೆಯಲ್ಲಿ ಆದ್ಯತೆಯ ಕ್ರಮವಾಗಿ 1) ತೋಟಗಾರಿಕೆ 2) ರೇಷ್ಮೆ 3) ಮೀನುಗಾರಿಕೆ 4) ಜೈವಿಕ ಇಂಧನ 5) ಸಾವಯವ ಕೃಷಿ 6) ಕೃಷಿಗೆ ನೀಡಲಾಗುವುದು.

– ಸಾವಯವ ಕೃಷಿಗೆ ಸಂಬಂಧಿಸಿದಂತೆ ಯೋಜನೆಯನ್ನು ಜಾರಿ ಮಾಡುವ ಮತ್ತು ಉಸ್ತುವಾರಿ ಮಾಡುವುದು ಸಾವಯವ ಕೃಷಿ ಮಿಷನ್ ಜವಾಬ್ದಾರಿಯಾಗಿರುತ್ತದೆ.

– ಜೈವಿಕ ಇಂಧನಕ್ಕೆ ಸಂಬಂಧಿಸಿದಂತೆ ಯೋಜನೆಯನ್ನು ಜಾರಿ ಮಾಡುವ ಮತ್ತು ಉಸ್ತುವಾರಿ ಮಾಡುವುದು ಜೈವಿಕ ಇಂಧನ ಕಾರ್ಯಪಡೆಯ ಜವಾಬ್ದಾರಿಯಾಗಿರುತ್ತದೆ.

9. ಈ ಯೋಜನೆಯನ್ನು ಉತ್ತಮ ರೀತಿಯಲ್ಲಿ ವಿನ್ಯಾಸಗೊಳಿಸಿ ಪರಿವೀಕ್ಷಣೆ ಮತ್ತು ಕಾರ್ಯಕ್ಷಮತೆ ಹೆಚ್ಚಿಸಲು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಂಸ್ಥೆಗಳನ್ನು ತೆಗೆದುಕೊಳ್ಳುವ ಬಗ್ಗೆ ಆಯವ್ಯಯ ಭಾಷಣದಲ್ಲಿ ಮಂಡಿಸಿರುವಂತೆ ಅಗತ್ಯ ಕ್ರಮ ಕೈಗೊಳ್ಳಲು ಮತ್ತು ಇದಕ್ಕಾಗಿ ಉದ್ದೇಶಿಸಿರುವ ರೂ. 20.00 ಕೋಟಿ ಹಣವನ್ನು ವಿನಿಯೋಗಿಸಿಕೊಳ್ಳಲಾಗುವುದು.

10. ಈ ಯೋಜನೆಯ ಅನುಷ್ಠಾನದಲ್ಲಿ ಆಡಳಿತಾತ್ಮಕ ಹಾಗೂ ತಾಂತ್ರಿಕ ಸಮಸ್ಯೆಗಳೇನಾದರೂ ಉದ್ಭವಿಸಿದ್ದಲ್ಲಿ, ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಬಹುದಾದ ಮೇಲುಸ್ತುವಾರಿ ಸಮಿತಿಯು ಅಂತಹ ಆಡಳಿತಾತ್ಮಕ ಹಾಗೂ ತಾಂತ್ರಿಕ ಸಮಸ್ಯೆಗಳನ್ನು ಕುರಿತು ಸೂಕ್ತ ಪರಿಹಾರಗಳನ್ನು ಕಂಡು ಹಿಡಿದು, ಅವುಗಳಿಗೆ ಮಾನ್ಯ ಮುಖ್ಯಮಂತ್ರಿಯವರಿಂದ ಅನುಮೋದನೆ ಪಡೆದು ಅನುಷ್ಠಾನಗೊಳಿಸತಕ್ಕದ್ದು.

11. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 711 ಇಎಕ್ಸ್‌ಪಿ 4/2011, ದಿನಾಂಕ : 5.03.2011 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ : ಪಿಡಿ 01 ಪಿಎಫ್‌ಓ 2011, ದಿನಾಂಕ : 5.03.2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪರಂಧಾಮಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.

## ಸುವರ್ಣಭೂಮಿ ಯೋಜನೆ ಮಾರ್ಗಸೂಚಿ

ಕರ್ನಾಟಕ ರಾಜ್ಯದ ಮಾನ್ಯ ಮುಖ್ಯಮಂತ್ರಿಗಳು ತಮ್ಮ 2011–12ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರಾಜ್ಯದ 10 ಲಕ್ಷ ಸಣ್ಣ ಮತ್ತು ಅತಿ ಸಣ್ಣ ರೈತ ಕುಟುಂಬಗಳ ಪುನರುಜ್ಜೀವನಕ್ಕೆ "ಸುವರ್ಣಭೂಮಿ ಯೋಜನೆ" ಎಂಬ ವಿಶೇಷ ಯೋಜನೆಯನ್ನು ಘೋಷಿಸಿದ್ದಾರೆ. ಈ ಯೋಜನೆಯಲ್ಲಿ ಪರಿಶಿಷ್ಟ ಜಾತಿಯ 2 ಲಕ್ಷ ಹಾಗೂ ಪರಿಶಿಷ್ಟ ಪಂಗಡಗಳ 1 ಲಕ್ಷ ರೈತ ಕುಟುಂಬಗಳು ಸೇರಿವೆ. ಈ ಯೋಜನೆಯಲ್ಲಿ ಖುಷ್ಕಿ ಜಮೀನನ್ನು ಹೊಂದಿರುವ ಸಣ್ಣ ಮತ್ತು ಅತಿ ಸಣ್ಣ ರೈತ ಕುಟುಂಬಗಳಿಗೆ ರೂ. 10,000 ಗಳ ಪ್ರೋತ್ಸಾಹಧನವನ್ನು ನೇರವಾಗಿ ಬ್ಯಾಂಕುಗಳು ಹಾಗೂ ಸಹಕಾರ ಸಂಸ್ಥೆಗಳ ಮೂಲಕ ಎರಡು ಕಂತುಗಳಲ್ಲಿ ನೀಡಲಾಗುವುದು. ಈ ಪ್ರೋತ್ಸಾಹಧನವನ್ನು ಕಡಿಮೆ ಮೌಲ್ಯದ ಬೆಳೆ/ಚಟುವಟಿಕೆಗಳಿಂದ ಹೆಚ್ಚು ಮೌಲ್ಯದ ಬೆಳೆ/ಚಟುವಟಿಕೆಗಳಾದ ದ್ವಿದಳ ಧಾನ್ಯಗಳು, ಎಣ್ಣೆಕಾಳುಗಳು, ವಾಣಿಜ್ಯ ಬೆಳೆಗಳು, ಜೈವಿಕ ಇಂಧನ ಬೆಳೆಗಳು, ತೋಟಗಾರಿಕೆ ಬೆಳೆಗಳು ಮತ್ತು ರೇಷ್ಮೆ ಕೃಷಿ. ಸಾವಯವ ಕೃಷಿ, ಜೇನು ಸಾಕಾಣಿಕೆ ಸವಳು ಮತ್ತು ಜವಳು ಪ್ರದೇಶಗಳಲ್ಲಿ ಮೀನುಗಾರಿಕೆ ಕೈಗೊಳ್ಳುವ ರೈತರಿಗೂ ಸಹ ಈ ಸವಲತ್ತನ್ನು ನೀಡಲಾಗುವುದು.

**ಯೋಜನೆಯ ಮಾರ್ಗಸೂಚಿಗಳು**

1. **ಅರ್ಹತೆ ಷರತ್ತುಗಳು**
   - 5 ಎಕರೆಗಿಂತ ಕಡಿಮೆ ಜಮೀನು ಹೊಂದಿರುವ ರೈತರು ಮಾತ್ರ ಈ ಯೋಜನೆಯ ಫಲಾನುಭವಿಗಳಾಗಿರುತ್ತಾರೆ.
   - ತೆರೆದ ಬಾವಿ, ಬೋರ್‌ವೆಲ್, ಕೆರೆ ಮುಂತಾದ ನೀರಾವರಿ ಮೂಲಗಳನ್ನು ಹೊಂದಿರುವ ರೈತರು ಈ ಯೋಜನೆಯ ಉಪಯೋಗ ಪಡೆಯಲು ಅರ್ಹರಾಗಿರುತ್ತಾರೆ. ಅಚ್ಚುಕಟ್ಟು ಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ರೈತರು ಈ ಯೋಜನೆಯ ಪ್ರಯೋಜನ ಪಡೆಯಲು ಸಾಧ್ಯವಿಲ್ಲ.
   - ಅರ್ಜಿದಾರರು ಜಮೀನಿನ ಖಾತೆಯನ್ನು ತಮ್ಮ ಹೆಸರಿನಲ್ಲಿ ಹೊಂದಿರಬೇಕು.
   - ಜಂಟಿ ಖಾತೆಯನ್ನು ಹೊಂದಿದ ಅರ್ಜಿದಾರರಲ್ಲಿ ಒಬ್ಬ ಮಾತ್ರ ಈ ಪ್ರಯೋಜನೆಯನ್ನು ಪಡೆಯಬಹುದು ಹಾಗೂ ಈ ರೈತ ಇತರೆ ಹಿಸ್ಸೆದಾರರಿಂದ ನಿರಾಕ್ಷೇಪಣಾ ಪತ್ರವನ್ನು ಪಡೆಯತಕ್ಕದ್ದು.
2. **ಪ್ರೋತ್ಸಾಹಧನದ ಗರಿಷ್ಠ ಮೊತ್ತ**
   - ಪ್ರತಿ ರೈತನಿಗೆ ಪ್ರೋತ್ಸಾಹಧನವಾಗಿ ಒಟ್ಟು ರೂ. 10,000 ಗಳನ್ನು ಗರಿಷ್ಠ 2 ಎಕರೆಗೆ ಮೀರದಂತೆ ನೀಡಲಾಗುವುದು. ಹಿಡುವಳಿ ಗಾತ್ರ 2 ಎಕರೆಗಿಂತ ಕಡಿಮೆ ಇದ್ದಲ್ಲಿ ಹಿಡುವಳಿಗೆ ಅನುಗುಣವಾಗಿ ಸಹಾಯಧನವನ್ನು ನೀಡಲಾಗುವುದು.
3. **ಸಾದಿಲ್ವಾರು ನಿಧಿ ಮತ್ತು ರೈತ ಅನುವುಗಾರರ ನೇಮಕ**
   - ಯೋಜನೆಯ ಪರಿಣಾಮಕಾರಿ ಅನುಷ್ಠಾನ ಹಾಗೂ ಉಸ್ತುವಾರಿಗಾಗಿ ಬೇಕಾಗುವ ಲೇಖನ ಸಾಮಗ್ರಿಗಳು, ಪ್ರವಾಸದ ಖರ್ಚು, ಗೌರವಧನ, ರೈತ ಅನುವುಗಾರರಿಗೆ ಪಾವತಿ ಮುಂತಾದ ಖರ್ಚುಗಳನ್ನು ಭರಿಸಲು ಇಲಾಖೆಗಳಿಗೆ ನಿಗದಿಪಡಿಸಿದ ಒಟ್ಟು ಮೊತ್ತದ ಶೇ.2 ರಷ್ಟು ಅನುದಾನವನ್ನು ಮೀಸಲಿಡಲಾಗಿದೆ.
4. **ರೈತ ಅನುವುಗಾರರ ನೇಮಕಾತಿ, ಪಾತ್ರ ಹಾಗೂ ಗೌರವಧನ ಪಾವತಿ**
   - ಕೃಷಿ ಹಾಗೂ ಇತರೆ ಇಲಾಖೆಗಳಲ್ಲಿ ಕ್ಷೇತ್ರ ಸಿಬ್ಬಂದಿಗಳ ಕೊರತೆಯಿದ್ದು, ಈ ಯೋಜನೆಯನ್ನು ಕಡಿಮೆ ಅವಧಿಯಲ್ಲಿ ಅನುಷ್ಠಾನಗೊಳಿಸಬೇಕಿರುವುದರಿಂದ 300 ರೈತರಿಗೆ ಒಬ್ಬರಂತೆ ರೈತ ಅನುವುಗಾರರನ್ನು ನೇಮಿಸಲಾಗುವುದು.
   - ಯೋಜನೆಯ ಪ್ರಚಾರ, ಮಾಹಿತಿ ಸಂಗ್ರಹಣೆ, ಫಲಾನುಭವಿಗಳ ಆಯ್ಕೆ, ಕ್ಷೇತ್ರ ತಪಾಸಣೆ, ಉಸ್ತುವಾರಿ, ವರದಿ ನೀಡುವುದು ಮುಂತಾದ ಚಟುವಟಿಕೆಗಳನ್ನು ಕೈಗೊಳ್ಳಲು ರೈತ ಅನುವುಗಾರರನ್ನು ಬಳಸಿಕೊಳ್ಳಲಾಗುವುದು.
   - ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕೆ ರೈತ ಅನುವುಗಾರರು ಅಧಿಕಾರಿಗಳಿಗೆ ಸಹಕಾರ ನೀಡುವರು.
   - ರೈತ ಅನುವುಗಾರರನ್ನು ಹೋಬಳಿ ಮಟ್ಟದ ಕಛೇರಿಗಳಲ್ಲಿ ನೇಮಿಸುವುದು ಹಾಗೂ ಅವರು ಹೋಬಳಿ ಮಟ್ಟದ ಅಧಿಕಾರಿಗೆ ವರದಿ ಮಾಡುವುದು.
   - ರೈತ ಅನುವುಗಾರರು ಆರೋಗ್ಯವಂತರು, ಸ್ನೇಹಪರರು, ಅಕ್ಷರಸ್ಥರು, ಉತ್ತಮ ಸಂವಾಹಕರಾಗಿರುವುದಲ್ಲದೇ ಅದೇ ಹೋಬಳಿಯ ನಿವಾಸಿಯಾಗಿರಬೇಕು.
   - ರೈತ ಅನುವುಗಾರರಿಗೆ ಪ್ರತಿ ದಿನಕ್ಕೆ ರೂ. 150 ಗಳ ಗೌರವಧನವನ್ನು ಸಾದಿಲ್ವಾರು ನಿಧಿಯಿಂದ ನೀಡಬೇಕು ಹಾಗೂ ಇವರನ್ನು ಗರಿಷ್ಠ 240 ದಿನಗಳವರೆಗೆ ಮಾತ್ರ ನೇಮಿಸಿಕೊಳ್ಳುವುದು.
5. **ಸಣ್ಣ ಮತ್ತು ಅತಿ ಸಣ್ಣ ರೈತ ಪಟ್ಟಿ ಸಂಗ್ರಹಣೆ ಹಾಗೂ ಕಂಪ್ಯೂಟರೀಕರಣ**
   - ಕಂದಾಯ ಇಲಾಖೆಯಿಂದ ದೃಢೀಕರಿಸಿದ ಸಣ್ಣ ಮತ್ತು ಅತಿ ಸಣ್ಣ ರೈತರ ಪಟ್ಟಿ ಪಡೆಯುವುದು.
   - ಸಣ್ಣ ಮತ್ತು ಅತಿ ಸಣ್ಣ ರೈತರ ಪಟ್ಟಿಯನ್ನು ಹೊರಗುತ್ತಿಗೆ ಆಧಾರದ ಮೇಲೆ ಹೋಬಳಿ ಮಟ್ಟದಲ್ಲಿ ಕಂಪ್ಯೂಟರೀಕರಣ ಮಾಡಲಾಗುವುದು ಹಾಗೂ ಕಂಪ್ಯೂಟರೀಕೃತ ಪ್ರತಿಯನ್ನು ಕಂದಾಯ ಇಲಾಖೆಯ ಅಧಿಕಾರಿಗಳು ದೃಢೀಕರಿಸಬೇಕು.
   - ದೃಢೀಕೃತ ಕಂಪ್ಯೂಟರೀಕೃತ ಪಟ್ಟಿಯನ್ನು ಎಲ್ಲಾ ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶಿಸುವುದು ಹಾಗೂ ಅಂತರ್ಜಾಲದಲ್ಲಿ ಅಳವಡಿಸುವುದು.
   - ಯೋಜನೆಯ ಬಗ್ಗೆ ವ್ಯಾಪಕ ಪ್ರಚಾರ ಮಾಡಲಾಗುವುದು.

6. **ಅರ್ಜಿಗಳನ್ನು ಕೊಡುವುದು ಹಾಗೂ ಸ್ವೀಕರಿಸುವುದು**

- ವಿದ್ಯುನ್ಮಾನ ಅನುವರ್ತನಶೀಲವಾದ (e-compliant) ಅರ್ಜಿಗಳು 3 ವಿಭಾಗಗಳನ್ನು ಒಳಗೊಂಡಿರುತ್ತದೆ. ಮೊದಲ ವಿಭಾಗವು ಸಾಮಾನ್ಯ ಮಾಹಿತಿಯ ವಿಭಾಗವಾಗಿದ್ದು ಅದರಲ್ಲಿ ಕ್ರಮಸಂಖ್ಯೆ ರೈತನ ಖಾಸಗಿ ವಿವರಗಳು, ಹಿಡುವಳಿ ವಿವರಗಳು, ಪ್ರಸ್ತುತ ಬೆಳೆ ಉತ್ಪಾದನಾ ಚಟುವಟಿಕೆಗಳು, ಪ್ರಸ್ತಾಪಿತ ಬೆಳೆ ಉತ್ಪಾದನಾ ಚಟುವಟಿಕೆಗಳು, ಪ್ರಸ್ತಾಪಿತ ತಗಲುವ ವೆಚ್ಚ, ಪ್ರಸ್ತಾಪಿತ ತಗಲುವ ವೆಚ್ಚವನ್ನು ಭರಿಸಲು ಸರ್ಕಾರದ ಸಹಾಯಧನವನ್ನು ಹೊರತುಪಡಿಸಿ ಬೇರೆ ಆರ್ಥಿಕ ಮೂಲ, ಅಂದಾಜು ವಾರ್ಷಿಕ ಆದಾಯ, ಬ್ಯಾಂಕ್ ಖಾತೆ ವಿವರ ಮುಂತಾದ ವಿವರಗಳನ್ನು ಒಳಗೊಂಡಿರುತ್ತದೆ. ಎರಡನೇ ವಿಭಾಗವು ಲಾಟರಿ ವಿಭಾಗವಾಗಿದ್ದು, ಲಾಟರಿ ಪ್ರಕ್ರಿಯೆಗೆ ಅವಶ್ಯವಿರುವ ಕ್ರಮಸಂಖ್ಯೆ ಹಾಗೂ ರೈತನ ಖಾಸಗಿ ವಿವರಗಳನ್ನು ಒಳಗೊಂಡಿರುತ್ತದೆ. ಮೂರನೇ ವಿಭಾಗವು ಸ್ವೀಕೃತಿ ಪ್ರತಿಯಾಗಿದ್ದು, ಕ್ರಮಸಂಖ್ಯೆ ರೈತನ ಖಾಸಗಿ ವಿವರಗಳು, ದಿನಾಂಕ ಅರ್ಜಿಯನ್ನು ಸ್ವೀಕರಿಸುವ ಅಧಿಕಾರಿಯ ಸಹಿ ಹಾಗೂ ಮುದ್ರೆಯನ್ನು ಹೊಂದಿದ್ದು, ಈ ಪ್ರತಿಯನ್ನು ಹರಿದು ರೈತನಿಗೆ ನೀಡಲಾಗುವುದು. ಈ ಅರ್ಜಿಗಳನ್ನು ಎಲ್ಲಾ ಗ್ರಾಮ ಪಂಚಾಯತ್ ಕಛೇರಿಗಳು, ರೈತ ಸಂಪರ್ಕ ಕೇಂದ್ರಗಳು ಹಾಗೂ ಸಂಬಂಧಿತ ಇಲಾಖೆಗಳಲ್ಲಿ ವಿತರಿಸಲಾಗುವುದು.
- ರೈತರು ರೂ.10ರ ಛಾಪಾ ಕಾಗದದಲ್ಲಿ ಸ್ವಯಂಘೋಷಣೆ, ಸ್ವಯಂದೃಢೀಕೃತ ಪಹಣಿಯ ಜೆರಾಕ್ಸ್ ಪ್ರತಿಗಳು, ಜಾತಿ ಪ್ರಮಾಣಪತ್ರ (ಪ.ಜಾ. ಮತ್ತು ಪ.ಪಂ. ರೈತರಿಗೆ) ಹಾಗೂ ಬ್ಯಾಂಕ್ ಪಾಸ್ ಪುಸ್ತಕವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.
- ಹೋಬಳಿ ಮಟ್ಟದ ರೈತ ಸಂಪರ್ಕ ಕೇಂದ್ರಗಳಲ್ಲಿ ಮಾತ್ರ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಈ ಹಂತದಲ್ಲಿ ಅರ್ಜಿಗಳ ಪ್ರಾಥಮಿಕ ಪರಿಶೀಲನೆ ನಡೆಸಿ ಮಾಹಿತಿಗಳು ತಪ್ಪಿದ್ದಲ್ಲಿ ಅದನ್ನು ಸರಿಪಡಿಸಲಾಗುವುದು.
- ರೈತ ಸಂಪರ್ಕ ಕೇಂದ್ರಗಳಲ್ಲಿ ಪೂರ್ಣಗೊಳಿಸಿದ ಅರ್ಜಿಗಳನ್ನು ಪಡೆಯುವ ಸಂದರ್ಭದಲ್ಲಿ ಅವುಗಳಿಗೆ ಪ್ರತ್ಯೇಕ ಮೆಷೀನ್ ಮುದ್ರಿತ ಒಂದೇ ಸಂಖ್ಯೆಯನ್ನು ಅರ್ಜಿಯ ಸಾಮಾನ್ಯ ವಿಭಾಗ, ಲಾಟರಿ ವಿಭಾಗ ಹಾಗೂ ಸ್ವೀಕೃತಿ ವಿಭಾಗಕ್ಕೆ ನೀಡುವುದು.
- ಪ್ರತಿ ಸಣ್ಣ ಮತ್ತು ಅತಿ ಸಣ್ಣ ರೈತನು ತನ್ನ ಹೆಸರಿನಲ್ಲಿ ಒಂದು ಅರ್ಜಿಯನ್ನು ಮಾತ್ರ ಸಲ್ಲಿಸಬೇಕು. ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
- ರೈತನು ಬ್ಯಾಂಕ್ ಖಾತೆಯನ್ನು ಹೊಂದಿರದಿದ್ದಲ್ಲಿ ಆಯಾ ಇಲಾಖೆಗಳು ಬ್ಯಾಂಕ್ ಖಾತೆ ತೆರೆಸುವ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು.

7. **ರೈತರ ವಿವರಗಳ ಕಂಪ್ಯೂಟರೀಕರಣ, ಪರಿಶೀಲನೆ ಹಾಗೂ ವಿಂಗಡಣೆ**

- ಅರ್ಜಿಯಲ್ಲಿರುವ ರೈತರ ಸಂಪೂರ್ಣ ಮಾಹಿತಿಯನ್ನು ಹೊರಗುತ್ತಿಗೆ ಆಧಾರದ ಮೇಲೆ ಹೋಬಳಿ ಮಟ್ಟದಲ್ಲಿ ಕಂಪ್ಯೂಟರೀಕರಣಗೊಳಿಸಿ ಅಂತರ್ಜಾಲದಲ್ಲಿ ಅಳವಡಿಸುವುದು.
- ಅರ್ಜಿಯಲ್ಲಿ ನೀಡಿರುವ ವಿವರಗಳು (ರೈತ ಮತ್ತು ಹಿಡುವಳಿ) ಹಾಗೂ ಕಂದಾಯ ಇಲಾಖೆಯು ನೀಡಿರುವ ವಿವರಗಳನ್ನು ಪರಿಶೀಲಿಸಲಾಗುವುದು.
- ರೈತನು ಕೈಗೊಳ್ಳುವ ಪ್ರಮುಖ ಚಟುವಟಿಕೆಯ ಆಧಾರದ ಮೇಲೆ ಮಾಹಿತಿಯನ್ನು ಇಲಾಖಾವಾರು ವಿಂಗಡಿಸಲಾಗುವುದು.
- ರೈತನು ಕೈಗೊಳ್ಳುವ ಪ್ರಮುಖ ಚಟುವಟಿಕೆಯ ಆಧಾರದ ಮೇಲೆ ಮಾಹಿತಿಯನ್ನು ಇಲಾಖಾವಾರು ವಿಂಗಡಿಸಿ ಅನುಷ್ಠಾನಕ್ಕಾಗಿ ಆಯಾ ಇಲಾಖೆಗಳಿಗೆ ಕಳುಹಿಸಲಾಗುವುದು (ಕೃಷಿ, ತೋಟಗಾರಿಕೆ, ರೇಷ್ಮೆ, ಸಾವಯವ ಕೃಷಿ ಹಾಗೂ ಜೈವಿಕ ಇಂಧನ ಕಾರ್ಯಪಡೆ).
- ಸಾವಯವ ಕೃಷಿ ಮತ್ತು ಜೈವಿಕ ಇಂಧನ ಸೌಲಭ್ಯಗಳನ್ನು ಪಡೆಯಲು ಏಕ ರೀತಿಯ ನಮೂನೆಯಲ್ಲಿ ಅರ್ಜಿಯನ್ನು ಪಡೆದು, ಸಾವಯವ ಕೃಷಿ ಮಿಷನ್ ಮತ್ತು ಜೈವಿಕ ಇಂಧನ ಕಾರ್ಯ ದಳ (Bio-fuel Task Force) ಗಳಿಗೆ ಆಯ್ಕೆ ಮತ್ತು ಉಸ್ತುವಾರಿ ಪ್ರಕ್ರಿಯೆಗಾಗಿ ವರ್ಗಾಯಿಸುವುದು.
- ಸಾವಯವ ಕೃಷಿಗೆ ಸಂಬಂಧಿಸಿದಂತೆ ಚಾಲ್ತಿ ಯೋಜನೆಯಲ್ಲಿ ಇರುವ ಅರ್ಹತಾ ಷರತ್ತುಗಳಿಗನುಗುಣವಾಗಿ ಯೋಜನೆಯನ್ನು ಜಾರಿ ಮತ್ತು ಉಸ್ತುವಾರಿ ಮಾಡುವುದು. ಇದು ಸಾವಯವ ಕೃಷಿ ಮಿಷನ್ ಜವಾಬ್ದಾರಿಯಾಗಿರುತ್ತದೆ.
- ಜೈವಿಕ ಇಂಧನಕ್ಕೆ ಸಂಬಂಧಿಸಿದಂತೆ ಯೋಜನೆಯನ್ನು ಜಾರಿಗೊಳಿಸುವುದು ಮತ್ತು ಉಸ್ತುವಾರಿ ಮಾಡುವುದು ಜೈವಿಕ ಇಂಧನ ಕಾರ್ಯ ಪಡೆ (Task Force) ಯ ಜವಾಬ್ದಾರಿಯಾಗಿರುತ್ತದೆ. ರೈತರು ತಮ್ಮ ಹೊಲಗಳಲ್ಲಿ ಬದುಗಳ ಮೇಲೆ ಮಾತ್ರ ಬೆಳೆಯದೆ ಒಂದು ಬ್ಲಾಕ್‌ನಲ್ಲಿ ಬೆಳೆಯನ್ನು ಬೆಳೆಯಲು ಮುಂಬರುವ ರೈತರನ್ನು ಈ ಯೋಜನೆಯಡಿಯಲ್ಲಿ ಪರಿಗಣಿಸುವುದು.

8. **ಫಲಾನುಭವಿಗಳ ಆಯ್ಕೆ**

- ಕಂದಾಯ ಇಲಾಖೆಯ ಸಣ್ಣ ಮತ್ತು ಅತಿ ಸಣ್ಣ ರೈತರ ಪಟ್ಟಿಯಲ್ಲಿ ಹೆಸರಿರುವ ರೈತರ ಅರ್ಜಿಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು.
- ಆಯಾ ಇಲಾಖೆಯ ಅಧಿಕಾರಿಗಳು ಅರ್ಜಿಗಳನ್ನು ವರ್ಗವಾರು/ಜಾತಿವಾರು ವಿಂಗಡನೆ ಮಾಡುವರು.
- ಅರ್ಹ ಮಹಿಳಾ ಅರ್ಜಿದಾರರಿಗೆ ಮೊದಲ ಆದ್ಯತೆ ನೀಡುವುದು. ಮಹಿಳೆಯರ ಸಂಖ್ಯೆಯು ಕಡಿಮೆ ಇದ್ದರೆ ಗುರಿಯನ್ನು ಅದೇ ವರ್ಗದ ಪುರುಷ ರೈತರಿಗೆ ವರ್ಗಾವಣೆ ಮಾಡಲಾಗುವುದು.
- ಇಲಾಖೆಯು ನಿಗದಿಪಡಿಸಿದ ವರ್ಗವಾರು/ಜಾತಿವಾರು ಗುರಿಗಿಂತ ಸ್ವೀಕರಿಸಿದ ಅರ್ಜಿಗಳು ಹೆಚ್ಚಿಗೆ ಇದ್ದಲ್ಲಿ ಫಲಾನುಭವಿಗಳನ್ನು ಲಾಟರಿ ಮಾದರಿಯಲ್ಲಿ ಆಯ್ಕೆ ಮಾಡಲಾಗುವುದು. ಇಲ್ಲದಿದ್ದ ಪಕ್ಷದಲ್ಲಿ ಅರ್ಜಿದಾರರೆಲ್ಲರನ್ನು ಆಯ್ಕೆ ಮಾಡಲಾಗುವುದು.
- ಆಯ್ಕೆಯಾದ ಫಲಾನುಭವಿಗಳ ಪಟ್ಟಿಯನ್ನು ಗಣಕೀಕರಣಗೊಳಿಸಿ ಎಲ್ಲಾ ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶಿಸಲಾಗುವುದು ಹಾಗೂ ಅಂತರ್ಜಾಲದಲ್ಲಿ ಅಳವಡಿಸುವುದು.

- ಯಾವುದಾದರೂ ಇಲಾಖೆಯಲ್ಲಿ ನಿಗದಿಪಡಿಸಿದ ವರ್ಗವಾರು/ಜಾತಿವಾರು ಗುರಿಗಿಂತ ಸ್ವೀಕರಿಸಿದ ಅರ್ಜಿಗಳು ಕಡಿಮೆ ಇದ್ದಲ್ಲಿ ಗುರಿಯನ್ನು ಅತಿ ಹೆಚ್ಚು ಅರ್ಜಿದಾರರಿರುವ ಇಲಾಖೆಗೆ ವರ್ಗಾವಣೆ ಮಾಡಲಾಗುವುದು.

9. **ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ**

- ಫಲಾನುಭವಿಗಳ ಆಯ್ಕೆಯಲ್ಲಿ ಆದ್ಯತೆಯನ್ನು ಕ್ರಮವಾಗಿ ತೋಟಗಾರಿಕೆ, ರೇಷ್ಮೆ, ಜೈವಿಕ ಇಂಧನ, ಮೀನುಗಾರಿಕೆ, ಸಾವಯವ ಕೃಷಿ, ಕೃಷಿಗೆ ನೀಡಲಾಗುವುದು.
- ಎಲ್ಲಾ ಚಟುವಟಿಕೆಗಳಿಗೆ (ಮಾಹಿತಿ ಕ್ರೋಢೀಕರಣ, ಉಸ್ತುವಾರಿ ಇತ್ಯಾದಿ) ತಾಲ್ಲೂಕನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಫಲಾನುಭವಿಗಳ ಆಯ್ಕೆಯನ್ನು ಮಾಡಲಾಗುವುದು.
- ನಿಗದಿತ ಗುರಿಗಿಂತ ಅರ್ಜಿಗಳ ಸಂಖ್ಯೆಯು ಹೆಚ್ಚಿಗೆ ಇದ್ದಲ್ಲಿ ಲಾಟರಿ ಮಾದರಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು.
- ಲಾಟರಿ ಮಾದರಿಯಲ್ಲಿ ಆಯ್ಕೆ ಮಾಡುವ ಪ್ರಕ್ರಿಯೆ (ಸ್ಥಳ, ದಿನಾಂಕ, ಇತರೆ) ಬಗ್ಗೆ ವ್ಯಾಪಕ ಪ್ರಚಾರ ನೀಡಲಾಗುವುದು.
- ಲಾಟರಿಯನ್ನು ರೈತರಿಗೆ ಅನುಕೂಲವಾದ ಸ್ಥಳ ಹಾಗೂ ದಿನಾಂಕದಂದು ನಡೆಸಲಾಗುವುದು.
- ಅರ್ಜಿಯ ಎರಡನೇ ಭಾಗವನ್ನು (ಲಾಟರಿ ವಿಭಾಗ) ಹರಿದು, ಮಡಚಿ ಡಬ್ಬಕ್ಕೆ ಹಾಕಲಾಗುವುದು.
- ಸಾರ್ವಜನಿಕರ ಸಮ್ಮುಖದಲ್ಲಿ ಇಲಾಖೆಯ ಅಧಿಕಾರಿಗಳು ಲಾಟರಿ ಎತ್ತಿ ಫಲಾನುಭವಿಗಳನ್ನು ಆಯ್ಕೆ ಮಾಡುವರು.
- ಈ ಲಾಟರಿ ಪ್ರಕ್ರಿಯೆಯನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಥವಾ ಅವರು ನೇಮಿಸಿದ ಅಧಿಕಾರಿಗಳು ಮೇಲ್ವಿಚಾರಣೆ ಮಾಡುವುದು.

10. **ಆಯ್ಕೆಯಾದ ಫಲಾನುಭವಿಗಳಿಗೆ ಪ್ರೋತ್ಸಾಹಧನ ವಿತರಿಸುವ ವಿಧಾನ**

- ಪ್ರೋತ್ಸಾಹಧನವನ್ನು ನೇರವಾಗಿ ಬ್ಯಾಂಕುಗಳು ಹಾಗೂ ಸಹಕಾರ ಬ್ಯಾಂಕುಗಳ ಮೂಲಕ ಎರಡು ಕಂತುಗಳಲ್ಲಿ ನೀಡಲಾಗುವುದು.
- ಜಿಲ್ಲೆಗಳ ಗುರಿಯ ಆಧಾರದ ಮೇಲೆ ಇಲಾಖಾ ಮುಖ್ಯಸ್ಥರು ಅನುದಾನವನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಾರೆ. ಜಿಲ್ಲಾ ಮುಖ್ಯಸ್ಥರು ತಾಲ್ಲೂಕು ಮಟ್ಟದ ಅಧಿಕಾರಿಯ ಖಾತೆಗೆ ವರ್ಗಾವಣೆ ಮಾಡುವರು. ತಾಲ್ಲೂಕು ಮಟ್ಟದ ಅಧಿಕಾರಿಯು ಬ್ಯಾಂಕ್ ವ್ಯವಸ್ಥಾಪಕರ ಮೂಲಕ ರೈತರ ಖಾತೆಗೆ ವರ್ಗಾವಣೆ ಮಾಡುವರು.

11. **ಮೊದಲನೇ ಕಂತಿನ ಅನುದಾನ ಪಾವತಿ**

- ಹಣ ಬಿಡುಗಡೆ ಕಾರ್ಯವನ್ನು ನೇರವಾಗಿ ಸಂಬಂಧಿತ ಆಡಳಿತ ಇಲಾಖೆ ನಿರ್ವಹಿಸುವುದು.
- ತಾಲ್ಲೂಕು ಮಟ್ಟದಲ್ಲಿ ಆಯ್ಕೆಯಾದ ಫಲಾನುಭವಿಗಳ ಪಟ್ಟಿಯನ್ನು ಬ್ಯಾಂಕ್‌ವಾರು, ಶಾಖಾವಾರು ವಿಂಗಡಿಸಿ ಮೊದಲನೇ ಕಂತಿಗೆ ಬ್ಯಾಂಕ್‌ವಾರು, ಶಾಖಾವಾರು ಅವಶ್ಯವಿರುವ ಅನುದಾನವನ್ನು ನಿಗದಿಪಡಿಸುವುದು.
- ತಾಲ್ಲೂಕು ಮಟ್ಟದ ಅಧಿಕಾರಿಗಳು ಬ್ಯಾಂಕ್‌ವಾರು, ಶಾಖಾವಾರು ಚೆಕ್ಕುಗಳನ್ನು ನೀಡುವರು.
- ಬ್ಯಾಂಕ್‌ವಾರು, ಶಾಖಾವಾರು ಚೆಕ್ಕುಗಳನ್ನು ಆಯಾ ಬ್ಯಾಂಕುಗಳ ವ್ಯವಸ್ಥಾಪಕರುಗಳಿಗೆ ಸಂದಾಯ ಸೂಚನೆಯೊಂದಿಗೆ (advice) ಆಯ್ಕೆಯಾದ ಫಲಾನುಭವಿಗಳ ಹೆಸರು, ವಿಳಾಸ, ಬ್ಯಾಂಕ್ ವಿವರ ಹಾಗೂ ಸಂದಾಯ ಮಾಡಬೇಕಿರುವ ಮೊತ್ತವನ್ನು ತಿಳಿಸಬೇಕು.
- ಸಂಬಂಧಪಟ್ಟ ವ್ಯವಸ್ಥಾಪಕರು ಸಂದಾಯ ಸೂಚನೆಯ (advice) ಮೇರೆಗೆ ಫಲಾನುಭವಿಗಳ ಖಾತೆಗೆ ಹಣವನ್ನು ವರ್ಗಾವಣೆ ಮಾಡುವರು.
- ಫಲಾನುಭವಿಗಳ ಖಾತೆಗೆ ಹಣವನ್ನು ವರ್ಗಾವಣೆ ಮಾಡಿದ ನಂತರ ವ್ಯವಸ್ಥಾಪಕರು ಸಂಬಂಧಪಟ್ಟ ತಹಸೀಲ್ದಾರರಿಗೆ ಫಲಾನುಭವಿಗಳ ಹೆಸರು, ಬ್ಯಾಂಕ್ ಖಾತೆ ಸಂಖ್ಯೆ, ದಿನಾಂಕ ಹಾಗೂ ವರ್ಗಾವಣೆ ಮಾಡಿದ ಮೊತ್ತವನ್ನೊಳಗೊಂಡ ಪತ್ರವನ್ನು ನೀಡುವರು.

12. **ಎರಡನೇ ಕಂತಿನ ಅನುದಾನ ಪಾವತಿ**

- ರೈತ ಅನುವುಗಾರರು ಆಯ್ಕೆಯಾದ ಫಲಾನುಭವಿಗಳ ಜಮೀನುಗಳಿಗೆ ಆಗಾಗ್ಗೆ ಭೇಟಿ ನೀಡಿ ರೈತನು ನೀಡಿರುವ ಮಾಹಿತಿಯ ಸತ್ಯಾಸತ್ಯತೆಯನ್ನು ಪರಿಶೀಲಿಸುವರು.
- ರೈತ ಅನುವುಗಾರರಿಗೆ ಆಯ್ಕೆಯಾದ ಫಲಾನುಭವಿಯು ಪ್ರಸ್ತುತ ಕೈಗೊಳ್ಳುತ್ತಿರುವ ಬೆಳೆ ಚಟುವಟಿಕೆ ಹಾಗೂ ಪ್ರಸ್ತಾಪಿಸಿದ ಬೆಳೆ ಚಟುವಟಿಕೆಗಳನ್ನು ಕೈಗೊಂಡಿರುವ ಬಗ್ಗೆ ಒಂದು ಚೆಕ್‌ಲಿಸ್ಟ್ ಅನ್ನು ನೀಡಿ ಭರ್ತಿ ಮಾಡಿದ ಚೆಕ್‌ಲಿಸ್ಟ್ ಅನ್ನು ಹೋಬಳಿ ಮಟ್ಟದ ಅಧಿಕಾರಿಗಳಿಗೆ ನೀಡುವುದು.
- ಎರಡನೇ ಕಂತಿನ ಹಣ ಬಿಡುಗಡೆಯ ಮುನ್ನ, ಸಂಬಂಧಿತ ಆಡಳಿತ ಇಲಾಖೆಗಳು ರೈತರ ಕ್ಷೇತ್ರ ಪರಿಶೀಲನೆಯನ್ನು, ತಾಲ್ಲೂಕು ಮಟ್ಟದ ವಿವಿಧ ಇಲಾಖೆಯ ಅಧಿಕಾರಿಗಳಿಂದ ಪ್ರತಿ ಶತ 100 ರಷ್ಟು ಪರಿಶೀಲನೆ ಮಾಡಿಸುವುದು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿ, ಕಾರ್ಯ ನಿರ್ವಹಣಾಧಿಕಾರಿ ಮತ್ತು ತಾಲ್ಲೂಕು ಮಟ್ಟದಲ್ಲಿ ತಹಸೀಲ್ದಾರರು ಮತ್ತು ತಾಲ್ಲೂಕು ನಿರ್ವಹಣಾಧಿಕಾರಿರವರು ಸಹಯೋಗದೊಂದಿಗೆ ಸಂಯೋಜಿಸುವುದು (to coordinate).
- ಜಿ.ಪಿ.ಎಸ್. ಪೂರಕ ಛಾಯಾ ಚಿತ್ರಗಳನ್ನು, ರೈತ ಆಯ್ಕೆ ಮಾಡಲಾದ ಚಟುವಟಿಕೆಯ ಅಥವಾ ತೋಟದ ಬದಲಾವಣೆಗೆ ಅಳವಡಿಸುವುದು ಮತ್ತು ಈ ತರಹದ ದಾಖಲಾತಿಯ ನಂತರವೇ ಎರಡನೇ ಕಂತಿನ ಹಣವನ್ನು ನೀಡುವುದು.
- ಎರಡನೇ ಕಂತಿನ ಹಣ ಬಿಡುಗಡೆಯ ಮುನ್ನ ಸಂಬಂಧಿತ ಆಡಳಿತ ಇಲಾಖೆಗಳು ವಿವರವಾದ ಚೆಕ್‌ಲಿಸ್ಟ್‌ಗಳನ್ನೊಳಗೊಂಡ ಮಾರ್ಗಸೂಚಿಗಳನ್ನು ಎರಡನೇ ಕಂತಿನ ಹಣದ ಬಿಡುಗಡೆ ಮಾಡಲು ರಚಿಸುವುದು.

- ಫಲಾನುಭವಿಯು ತಾನು ಪ್ರಸ್ತಾಪಿಸಿದ ಬೆಳೆಗೆ ಚಟುವಟಿಕೆಯನ್ನು ಬದಲಿಸಿಕೊಂಡಿದ್ದರೆ ಮಾತ್ರ ಎರಡನೇ ಕಂತಿನ ಅನುದಾನವನ್ನು ಪಡೆಯಲು ಅರ್ಹರಾಗಿರುತ್ತಾರೆ.
- ರೈತ ಹಾಗೂ ಆತನು ಕೈಗೊಂಡ ಬೆಳೆ ಚಟುವಟಿಕೆಯ ಛಾಯಾಚಿತ್ರವನ್ನು GPS
- ಮೊದಲನೇ ಕಂತಿನ ಅನುದಾನವನ್ನು ಪಾವತಿ ಮಾಡಿದ ರೀತಿಯಲ್ಲಿಯೇ ಎರಡನೇ ಕಂತಿನ ಅನುದಾನವನ್ನು ಪಾವತಿಸುವುದು.

**13. ರೈತರು ತಪ್ಪು ಮಾಹಿತಿ ನೀಡಿದ್ದಲ್ಲಿ ಅಥವಾ ಸಹಾಯಧನವನ್ನು ದುರ್ಬಳಕೆ ಮಾಡಿದ್ದಲ್ಲಿ ತೆರಬೇಕಾದ ದಂಡ**

- ಯಾವುದೇ ಸಂದರ್ಭದಲ್ಲಿ ರೈತನು ತನ್ನ ಅರ್ಜಿಯಲ್ಲಿ ತಪ್ಪು ಮಾಹಿತಿಯನ್ನು ನೀಡಿದ್ದಲ್ಲಿ ಅಥವಾ ತಾನು ಪ್ರಸ್ತಾಪಿಸಿದ ಚಟುವಟಿಕೆಯನ್ನು ಕೈಗೊಳ್ಳುವಲ್ಲಿ ವಿಫಲನಾದಲ್ಲಿ ಅಥವಾ ಸರ್ಕಾರವು ನೀಡಿರುವ ಸಹಾಯಧನವನ್ನು ದುರ್ಬಳಕೆ ಮಾಡಿದ್ದಲ್ಲಿ ಮುಂದಿನ ಮೂರು ವರ್ಷಗಳು ಇಲಾಖೆಯ ಯಾವುದೇ ಯೋಜನೆಯಡಿ ಸವಲತ್ತುಗಳನ್ನು ಪಡೆಯಲು ಅರ್ಹನಾಗಿರುವುದಿಲ್ಲ.

<u>ವಿಶೇಷ ಸೂಚನೆ</u> : **ಅಗತ್ಯವಿದ್ದಲ್ಲಿ ಸಂಬಂಧಿತ ಆಡಳಿತ ಇಲಾಖೆಗಳು ಹೆಚ್ಚುವರಿ ಮಾರ್ಗಸೂಚಿಗಳನ್ನು ಹೊರಡಿಸುವುದು. ಇಲಾಖೆಗಳು ಚಟುವಟಿಕೆಗಳ ಮತ್ತು ಬೆಳೆಗಳಿಗೆ ನೆರವು ಇರುವುದರ/ಇಲ್ಲದಿರುವ ಬಗ್ಗೆ ಮಾಹಿತಿ ಒದಗಿಸುವುದು.**

**14. ಯೋಜನೆಯ ಅನುಷ್ಠಾನ ವೇಳಾಪಟ್ಟಿ**

| ಕ್ರ.ಸಂ. | ಚಟುವಟಿಕೆ | ಕಾರ್ಯಾವಧಿ |
|---|---|---|
| 1 | ಯೋಜನೆಯ ಬಗ್ಗೆ ಪ್ರಚಾರ | ಮಾರ್ಚ್ 2011 – 3 ಹಾಗೂ 4ನೇ ವಾರ |
| 2 | ಕಂದಾಯ ಇಲಾಖೆಯಿಂದ ಸಣ್ಣ ಮತ್ತು ಅತಿ ಸಣ್ಣ ರೈತರ ಪಟ್ಟಿ ಪಡೆಯುವುದು | ಮಾರ್ಚ್ 2011 – 3 ಹಾಗೂ 4ನೇ ವಾರ |
| 3 | ಇ–ಆಡಳಿತ ಇಲಾಖೆಯಿಂದ ಸಣ್ಣ ಮತ್ತು ಅತಿ ಸಣ್ಣ ರೈತರ ಪಟ್ಟಿ ಕಂಪ್ಯೂಟರೀಕರಣ | ಮಾರ್ಚ್ 2011 – 4ನೇ ವಾರ ಹಾಗೂ ಏಪ್ರಿಲ್ 2011 ಮೊದಲನೇ ವಾರ |
| 4 | ಗ್ರಾಮ ಪಂಚಾಯತ್, ರೈತ ಸಂಪರ್ಕ ಕೇಂದ್ರ, ಸಂಬಂಧಪಟ್ಟ ಎಲ್ಲ ಇಲಾಖೆಯ ಕಛೇರಿಗಳಲ್ಲಿ ಅರ್ಜಿ ವಿತರಣೆ | ಮಾರ್ಚ್ 2011 – 4ನೇ ವಾರ ಹಾಗೂ ಏಪ್ರಿಲ್ 2011 ಮೊದಲನೇ ವಾರ |
| 5 | ರೈತ ಸಂಪರ್ಕ ಕೇಂದ್ರಗಳಲ್ಲಿ ಭರ್ತಿ ಮಾಡಿದ ಅರ್ಜಿಗಳ ಸಂಗ್ರಹಣೆ ಹಾಗೂ ಪರಿಶೀಲನೆ | ಏಪ್ರಿಲ್ 2011 ಮೊದಲನೇ ವಾರ ಹಾಗೂ 2ನೇ ವಾರ |
| 6 | ಇ–ಆಡಳಿತ ಇಲಾಖೆಯಿಂದ ರೈತರ ವಿವರಗಳ ಕಂಪ್ಯೂಟರೀಕರಣ, ಪ್ರಮುಖ ಕೃಷಿ ಚಟುವಟಿಕೆಯ ಆಧಾರದ ಮೇಲೆ ಅರ್ಜಿಗಳ ವಿಂಗಡಣೆ ಹಾಗೂ ಸಂಬಂಧಪಟ್ಟ ಇಲಾಖೆಗೆ ಪ್ರಮುಖ ಚಟುವಟಿಕೆಯ ಆಧಾರದ ಮೇಲೆ ಅರ್ಜಿಗಳನ್ನು ರವಾನಿಸುವುದು | ಏಪ್ರಿಲ್ 2011 – 2 ಹಾಗೂ 3ನೇ ವಾರ |
| 7 | ಅರ್ಜಿಗಳ ಸಂಖ್ಯೆಯು ಗುರಿಗಿಂತ ಹೆಚ್ಚಿಗೆ ಇದ್ದಲ್ಲಿ ಲಾಟರಿ ಎತ್ತುವುದು ಹಾಗೂ ಆಯ್ಕೆಯಾದ ಫಲಾನುಭವಿಗಳ ಪಟ್ಟಿಯನ್ನು ಪ್ರಕಟಿಸುವುದು | ಏಪ್ರಿಲ್ 2011 – 3 ಹಾಗೂ 4ನೇ ವಾರ |
| 8 | ಆಯ್ಕೆಯಾದ ಫಲಾನುಭವಿಗಳಿಗೆ ಮೊದಲನೇ ಕಂತಿನ ಅನುದಾನ ಪಾವತಿ | ಏಪ್ರಿಲ್ 2011 4ನೇ ವಾರ ಹಾಗೂ ಮೇ 2011 – ಮೊದಲನೇ ವಾರ |
| 9 | ರೈತ ಅನುವುಗಾರರು ಹಾಗೂ ಇಲಾಖಾ ಅಧಿಕಾರಿಗಳಿಂದ ಆಯ್ಕೆಯಾದ ಫಲಾನುಭವಿಗಳ ಕ್ಷೇತ್ರ ಭೇಟಿ ಹಾಗೂ ಪರಿಶೀಲನೆ | ಮೇ 2011 ರಿಂದ ಜುಲೈ 2011 |
| 10 | ಆಯ್ಕೆಯಾದ ಫಲಾನುಭವಿಗಳಿಗೆ ಎರಡನೇ ಕಂತಿನ ಅನುದಾನ ಪಾವತಿ | ಆಗಸ್ಟ್ 2011 |

ಪಿ.ಆರ್. 780

**ಪರಂಧಾಮಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.

## ENERGY SECRETARIAT

**Sub:** Change of company name from M/s Green Infra Wind Energy Private Limited to M/s Green Infra Wind Energy Limited-reg.

**Read:**
1. Govt. Order No. DE 243 NCE 2002, dated 5-3-2003
2. Govt. Order No. EN 244 NCE 2002, dated 5-3-2003
3. Govt. Order No. EN 373 NCE 2006, dated 1-9-2006
4. Govt. Order No. EN 34 NCE 2007, dated 28-2-2007
5. Govt. Order No. EN 454 NCE 2007, dated 31-12-2007
6. Govt. Order No. EN 380 NCE 2008, dated 15-12-2008
7. Govt. Order No. EN 9 NCE 2010, dated 22-1-2010
8. Govt. Order No. EN 10 NCE 2010, dated 22-1-2010
9. Letter No.: KRED/08/GIWEPL-GIWEL/2011/660 date: 15/23-2-2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, permission has been accorded for implementation of 56.50 MW wind power capacity in favour of M/s Bellary Wind Power Pvt. Ltd. at Bellary and Davanagare Districts.

In the Government Order read at (2) above, sanction has been accorded for implementation of 37.00 MW capacity Wind Power Project at Chitradurga and Tumkur district by M/s Chitradurga Wind Power Pvt. Limited.

In the Government Order read at (3) above, sanction has been accorded for the change of location and enhancement of capacity from 37.00 MW to 43.95 MW wind power project in favour of M/s Chitradurga Wind Power Pvt. Limited at Hosadurga town of Chitradurga district to Bharamasagar of Davanagere district.

In the Government Order read at (4) above, sanction has been accorded for enhancement of part capacity of 56.50 MW i.e., 10.00 MW to 23.10 MW in favour of M/s Bellary Wind Power Pvt. Ltd.,

In the Government Order read at (5) above, sanction has been accorded for transfer of 37.95 MW wind power capacity in favour of M/s BP Energy India Pvt. Ltd., from M/s Chitradurga Wind Power Private Limited at Bharamasagar of Davangere District.

In the Government Order read at (6) above, sanction has been accorded for transfer of 23.10 MW wind power capacity in favour of M/s BP Energy India Pvt. Ltd., at Telagi,Algilavada and Duggavati Villages of Davangere District from M/s Bellary Wind Power Private Limited.

In the Government Orders read at (7 & 8) above, permission has been accorded for the change of company's name from M/s BP Energy India Private Limited to M/s Green Infra Wind Energy Private Limited.

The Registrar of Companies, Maharastra, Mumbai has changed the company's name from M/s Green Infra Wind Energy Private Limited to M/s Green Infra Wind Energy Limited vide CIN No.: U23200MH2005PLC153775 dated: 18-6-2010.

Therefore in the letter read at (9) above, the Managing Director, Karnataka Renewable Energy Development Limited, Bangalore has sent proposal to Government to change the company's name from M/s Green Infra Wind Energy Private Limited to M/s Green Infra Wind Energy Limited.

The proposal has been examined in detail and hence the following Order:-

**Government Order No. : EN 154 NCE 2011, Bangalore, dated 14-03-2011**

Government accords approval for the change of company's name from M/s Green Infra Wind Energy Private Limited to M/s Green Infra Wind Energy Limited.

The Government has reserved the power to cancel/modify this Order

The terms and conditions of the Government Order read at (1) above shall IPSO FACTO applicable.

By Order and in the name of the Governor of Karnataka
**Suresh. B. Krishnappanavar**
Under Secretary to Government
Energy Department

P.R. 853

## ಇಂಧನ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ಇಎನ್/127/ಎನ್‌ಸಿಇ/2011, ಬೆಂಗಳೂರು, ದಿನಾಂಕ 08–03–2011

***

ಸರ್ಕಾರಿ ಆದೇಶ ಸಂಖ್ಯೆ: ಇಎನ್ 135 ಎನ್‌ಸಿಇ 2007 ದಿನಾಂಕ 19–12–2009ರ ಆದೇಶ ಭಾಗದ ಮೊದಲನೇ ಕಂಡಿಕೆಯ ಮೂರನೇ ಸಾಲಿನಲ್ಲಿ ನಮೂದಿಸಿರುವ:–

"(Weir-Longitude:74$^0$47'00" Latitude: 13$^0$3'30"

ಎಂಬುದನ್ನು ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದು:–

"(Weir-Longitude:74$^0$56'42" Latitude: 13$^0$04'59"

Power House-Longitude:74$^0$55'33" Latitude: 13$^0$04'41")"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. ನಂ. 854

## HEALTH & FAMILY WELFARE SECRETARIAT

**Sub:** Hiring of Procurement Consultant under KHSDRP-continuation-reg.

**Read:**
1. Govt. Order No. HFW/KHSDRP/Sect-14/2007, dt: 26-11-2007
2. Govt. Order No. HFW/KHSDRP/Sect-14/2007, dt: 20-02-2009
3. Govt. Order No. HFW/KHSDRP/Sect-14/2007, dt: 24-12-2009
4. Proceedings of the 23rd meeting of the Programme Steering Committee, dt: 02-12-2010.
5. E-mail of the World Bank, dtd: December 02-2010

**Preamble:**

In the Government Order read at (1) above Sri K. N. Venkataraman was appointed as a part-time Procurement Consultant for Karnataka Health System Development and Reform Project (KHSDRP), from 28-11-2007 to 27-11-2008. In the Government Order read at (2) above, his services were extended for a period of one year from 28-11-2008 to 27-11-2009 for KHSDRP, National Rural Health Mission (NRHM) and Karnataka State Drug Logistics and Warehousing Society (KSDL&WS). In the Government Order read at (3) above, his services were extended for a further period of one year from 28-11-2009 to 27-11-2010. The contract period has expired on 27-11-2010.

The consultant has been effectively monitoring and guiding the procurement activities taken up under the Project. He is also participating in the discussion with the World Bank/Project during Mission visits. He is giving his expert opinion on all important procurement issues. His services are found necessary for the Project. His remuneration has not been revised for the past 3 years. A proposal to enhance the remuneration was placed before the Programme Steering Committee (PSC), in its 23rd meeting held on 02-12-2010. The Committee has approved, vide proceedings read at (4) above, to enhance the remuneration from Rs. 3,000/-for half day and Rs. 5,000/- for full day to the revised rate of Rs. 4,000/- for half day and Rs. 7,000/-for full day subject to a ceiling limit of Rs. 70,000/-per month.

Also, a proposal to continue his services for one more year w.e.f. 28-11-2010 to 27-11-2011 was placed before the PSC. The PSC, vide proceedings read at (4) above, has approved to continue his services for a further period of one year with the enhanced remuneration. The World Bank has also conveyed its 'no objection' vide e-mail read at (5) above.

Hence, the following Order

**Government Order No. : HFW/KHSDRP/Sect-14/2007, Bangalore, dated 17-03-2011**

Under the circumstances explained in the preamble, Government are pleased to continue the services of Sri K.N. Venkataraman as part-time Procurement Consultant for KHSDRP, NRHM and KSDL&WS with an enhanced remuneration of Rs. 4,000/- (Rupees four thousand only) for half day and Rs. 7,000/- (Rupees seven thousand only) for full day subject to ceiling limit of Rs. 70,000/-(Rupees seventy thousand only) per month, for a further period of one year from 28-11-2010.

The Consultant shall execute a fresh contract agreement containing Terms of Reference. The Consultant is bound by the Terms of Reference that are part of the Contract agreement.

The expenditure towards his consultancy shall be debited under the budget head "2210-06-800-0-84-051 (General Expenses) during the contract period.

By Order and in the name of the Governor of Karnataka

**M. Shashidhar**

Deputy Secretary to Government

KHSDRP, Health & Family Welfare Department

P.R. 855

## ಕಾರ್ಮಿಕ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿ ಯಿಂದ ಅನುಮೋದನೆಯಾಗಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಕೆ.ಆರ್. ಪೇಟೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಾಇ 121 ಇಟಿಐ 2007, ದಿನಾಂಕ 04–03–2008
2. ಸರ್ಕಾರಿ ಆದೇಶ ಸಂಖ್ಯೆ: ಕಾಇ 268 ಇಟಿಐ 2009, ದಿನಾಂಕ 16–09–2009
3. ಸರ್ಕಾರಿ ಆದೇಶ ಸಂಖ್ಯೆ: ಕಾಇ 60 ಇಟಿಐ 2010, ದಿನಾಂಕ 09–03–2010
4. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಉತಇ/ತ/ಸಿಓಇ–ಪಿಪಿಪಿ/ವಿವ–79/2008–09(ಭಾಗ–2) ದಿನಾಂಕ 18–02–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2007–08ನೇ ಸಾಲಿನಲ್ಲಿ ಉನ್ನತೀಕರಿಸಲಾದ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಹಾಗೂ ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಇವರು ಕೇಂದ್ರ ಸರ್ಕಾರವು ಕಳುಹಿಸಿರುವ ಮೆಮೊರಂಡಮ್ ಆಫ್ ಅಸೋಸಿಯೇಷನ್‌ಗೆ ಸಹಿ ಮಾಡಲು ಅನುಮೋದನೆ ನೀಡಲಾಗಿದೆ. ಅಲ್ಲದೆ ಈ ಸಂಸ್ಥೆಗಳಿಗೆ ಐಎಂಸಿಯನ್ನು ರಚಿಸಲು ಹಾಗೂ ಅವುಗಳಿಗೆ ಆರ್ಥಿಕ ಹಾಗೂ ಆಡಳಿತಾತ್ಮಕ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿ ಯಿಂದ ಅನುಮೋದನೆಯಾಗಿರುವ 26 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿ ಯಿಂದ ಅನುಮೋದನೆಯಾಗಿರುವ 22 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ (4)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರದಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "Up-gradation of 1396 Govt. ITIs through PPP" ಅಡಿಯಲ್ಲಿ 2009–10ನೇ ಸಾಲಿನಲ್ಲಿ ಡಿ.ಜಿ.ಇ.ಟಿ ನವದೆಹಲಿಯವರು ಕೆ.ಆರ್. ಪೇಟೆ, ಸ.ಕೈ.ತ.ಸಂಸ್ಥೆಯನ್ನು ಉನ್ನತೀಕರಿಸಲು ಅನುಮೋದನೆ ನೀಡಿರುತ್ತಾರೆಂದು ಹಾಗೂ ಸಂಸ್ಥೆಗೆ ₹2.5 ಕೋಟಿಯಂತೆ ಬಡ್ಡಿರಹಿತ ಸಾಲವನ್ನು ಐ.ಎಂ.ಸಿ. ಹೆಸರಿನಲ್ಲಿ ತೆರೆಯಾಗಿರುವ ಬ್ಯಾಂಕ್ ಖಾತೆಗೆ ಜಮಾ ಆಗಿರುತ್ತದೆ ಎಂದು ತಿಳಿಸುತ್ತಾ 2009–10ನೇ ಸಾಲಿನಲ್ಲಿ ಉನ್ನತೀಕರಿಸಲಾಗುತ್ತಿರುವ ಕೆ.ಆರ್.ಪೇಟೆ, ಸ.ಕೈ.ತ.ಸಂಸ್ಥೆಗೆ ಸೂಕ್ತ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 45 ಇಟಿಐ 2011, ಬೆಂಗಳೂರು, ದಿನಾಂಕ : 21–03–2011**

2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಯೋಜನೆಯಾದ "ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 1396 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಉನ್ನತೀಕರಣ" ಅಡಿಯಲ್ಲಿ ಡಿಜಿಇಟಿಯಿಂದ ಅನುಮೋದನೆಯಾಗಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಕೆ. ಆರ್. ಪೇಟೆಯನ್ನು ಉನ್ನತೀಕರಿಸಲು ಮಂಜೂರಾತಿ ನೀಡಲಾಗಿದೆ.

ಕೆ. ಆರ್. ಪೇಟೆ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಐಎಂಸಿಯನ್ನು ರಚಿಸಲು ಹಾಗೂ ಇದನ್ನು ಸೊಸೈಟಿ ಕಾಯ್ದೆ ಅಡಿ ನೋಂದಾಯಿಸಲು ಮಂಜೂರಾತಿ ನೀಡಲಾಗಿದೆ. ಈ ಐಎಂಸಿಗಳಿಗೆ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರವನ್ನು ಸರ್ಕಾರಿ ಆದೇಶ ಸಂಖ್ಯೆ: ಕಾಇ 121 ಇಟಿಐ 2007 ದಿನಾಂಕ 04–03–2008 ರಲ್ಲಿ ನೀಡಿರುವಂತೆಯೇ ಪ್ರತ್ಯಾಯೋಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಹಿಬೂಬಸಾಬ**
ಪೀಠಾಧಿಕಾರಿ
ಕಾರ್ಮಿಕ ಇಲಾಖೆ
ಉದ್ಯೋಗ ಮತ್ತು ತರಬೇತಿ

ಪಿ.ಆರ್. 856

## ನಗರಾಭಿವೃದ್ಧಿ ಸಚಿವಾಲಯ

### ಸೇರ್ಪಡೆ ಆದೇಶ

ಸಂಖ್ಯೆ: ನಆಇ/377/ಬೆಂರೂಪ್ರಾ/2010, ಬೆಂಗಳೂರು, ದಿನಾಂಕ 18–03–2011

ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–II) ಗೆ ಸರ್ಕಾರದ ಅಂತಿಮ ಅನುಮೋದನೆಯನ್ನು ಸರ್ಕಾರದ ಆದೇಶ ಸಂಖ್ಯೆ: ನಆಇ 377 ಬೆಂರೂಪ್ರಾ 2010, ದಿನಾಂಕ 10–3–2011 ರಂದು ಹೊರಡಿಲಾಗಿದ್ದು, ಸದರಿ ಆದೇಶದಲ್ಲಿನ ನಿಬಂಧನೆಗಳೊಂದಿಗೆ ಈ ಕೆಳಕಂಡ ಷರತ್ತುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

3) ಪ್ರಾಧಿಕಾರದ ಆಯುಕ್ತರು, ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರಿಗೆ ಬರೆದಿರುವ ಪತ್ರ ಸಂಖ್ಯೆ: ಟಿಯುಡಿಎ:ಎಲ್ಎಕ್ಯೂ:ಸಿಆರ್:02:2142:2010–11, ದಿನಾಂಕ 7–3–2011ರಲ್ಲಿ ಕೋರಿರುವಂತೆ ಮುತ್ಸಂದ್ರ, ವಡ್ಡರಹಳ್ಳಿ ಮತ್ತು ಬೆಳಗುಂಬ ಗ್ರಾಮಗಳ ವಿವಿಧ ಸ.ನಂ.ಗಳಲ್ಲಿ ಪ್ರಾಧಿಕಾರವು ಉದ್ದೇಶಿಸಿರುವ 3 ಪ್ರತ್ಯೇಕ ವಸತಿ ಯೋಜನೆಗಳಿಗಾಗಿ ಪ್ರಸ್ತಾಪಿಸಿರುವ ಒಟ್ಟು 456 ಎಕರೆ 26 ಗುಂಟೆ ವಿಸ್ತೀರ್ಣದ ಜಮೀನುಗಳನ್ನು ವಸತಿಗಾಗಿ ಕಾಯ್ದಿರಿಸಿರುವ ಜಮೀನುಗಳೆಂದು ಪರಿಗಣಿಸತಕ್ಕದ್ದು ಹಾಗೂ ಈ ಬದಲಾವಣೆಯು ಈ ಕೆಳಕಂಡ ಉಪನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಅ) ಮೇಲ್ಕಂಡ ಯೋಜನೆಗಳನ್ನು 60:40ರ ಅನುಪಾತದ ಯೋಜನೆಯಡಿ ಭೂ ಮಾಲೀಕರ ಪಾಲುದಾರಿಕೆಯಲ್ಲಿ ಕೈಗೊಳ್ಳತಕ್ಕದ್ದು.

ಆ) ಸದರಿ ಯೋಜನೆಯನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸತಕ್ಕದ್ದು

ಇ) ಮೇಲ್ಕಂಡ ಯೋಜನೆಗಳಲ್ಲಿ ಒಳಗೊಂಡಿರುವ ಸ.ನಂ.ಗಳ ಜಮೀನುಗಳನ್ನು ಪ್ರಾಧಿಕಾರವು ತನ್ನ ಯೋಜನೆಯಿಂದ ಯಾವುದೇ ಕಾರಣಕ್ಕೂ ಡಿ–ನೋಟಿಫೈ ಮಾಡುವಂತಿಲ್ಲ.

4) ಮೇಲಿನ ಕ್ರ.ಸಂ. 1,2 ಮತ್ತು 3 ರಲ್ಲಿ ಅನುಮತಿಸಿರುವ ಭೂ ಉಪಯೋಗ ಬದಲಾವಣೆಗಳನ್ನು ಪ್ರಾಧಿಕಾರವು ಕೂಡಲೇ ಸಂಬಂಧಿತ ನಕ್ಷೆಯಲ್ಲಿ ಅಳವಡಿಸಿಕೊಂಡು 15 ದಿನಗಳೊಳಗಾಗಿ ಪರಿಷ್ಕೃತ ನಕ್ಷೆ ಹಾಗೂ ವರದಿಗಳಲ್ಲಿ ಸರ್ಕಾರದ ಸಹಿ ಹಾಗೂ ಮುದ್ರೆಯನ್ನು ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್. ನಂ. 859

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು ಚಕ್ರಬಾವಿ ಮತ್ತು ಇತರೆ ಗ್ರಾಮಗಳಿಗೆ ಸಬ್‌ಮಿಷನ್ ಯೋಜನೆಯಡಿ ಕುಡಿಯುವ ನೀರು ಸರಬರಾಜು ಯೋಜನೆಗೆ ವೈ.ಜಿ.ಗುಡ್ಡ ಕೆರೆಯಿಂದ ನೀರು ಪೂರೈಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಇವರ ಪ.ಸಂ:ಮುಇಂ/ಪಂರಾಇಂಇ/ತ್ವಗ್ರಾನೀಸ–1/ಸಇಂ–10/2009–10/2636/ದಿನಾಂಕ 30–06–2009.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ತಾಂಸ–1/ಸ.ಇಂ–1/2420/2008–2009/ದಿನಾಂಕ 18/06/2009 & 06–10–2010.

**ಪ್ರಸ್ತಾವನೆ :**

ಮಾಗಡಿ ತಾಲ್ಲೂಕು ಚಕ್ರಬಾವಿ ಹಾಗೂ ಇತರೆ ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಯೋಜನೆಗೆ ವೈ.ಜಿ.ಗುಡ್ಡ ಸಣ್ಣ ನೀರಾವರಿ ಕೆರೆಯಿಂದ 21 ಮಿಲಿಯನ್ ಘನ ಅಡಿಗಳಷ್ಟು ನೀರನ್ನು ಪಡೆಯಲು ಅನುಮತಿ ನೀಡುವಂತೆ ಮುಖ್ಯ ಇಂಜಿನಿಯರ್ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಬೆಂಗಳೂರು ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 30–06–2009ರ ಪತ್ರದಲ್ಲಿ ಕೋರಿದ್ದಾರೆ.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸಬ್‌ಮಿಷನ್ ಯೋಜನೆಯಡಿ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು ಚಕ್ರಬಾವಿ ಮತ್ತು ಇತರೆ ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಯೋಜನೆಗೆ ವೈ.ಜಿ.ಗುಡ್ಡ ಸಣ್ಣ ನೀರಾವರಿ ಕೆರೆಯಿಂದ 21 ಮಿಲಿಯನ್ ಘನ ಅಡಿಗಳಷ್ಟು ನೀರನ್ನು ಒದಗಿಸಲು ಅನುಮತಿ ನೀಡಬಹುದೆಂದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ರಾಷ್ಟ್ರೀಯ ಜಲ ನೀತಿಯಂತೆ ಕುಡಿಯುವ ನೀರಿನ ಬಳಕೆಗೆ ಪ್ರಥಮ ಆದ್ಯತೆ ನೀಡಬೇಕಾಗಿರುವುದರಿಂದ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪ್ರಸ್ತಾವವನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 159 ಮಸಾವಿ 2009, ಬೆಂಗಳೂರು, ದಿನಾಂಕ : 17–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು ಚಕ್ರಬಾವಿ ಮತ್ತು ಇತರೆ ಗ್ರಾಮಗಳಿಗೆ ಕುಡಿಯುವ ನೀರನ್ನು ಒದಗಿಸಲು ವೈ.ಜಿ. ಗುಡ್ಡ, ಸಣ್ಣ ನೀರಾವರಿ ಕೆರೆಯಿಂದ ಒಟ್ಟು 21 ಮಿಲಿಯನ್ ಘನ ಅಡಿಗಳಷ್ಟು ನೀರನ್ನು ಉಪಯೋಗಿಸಿಕೊಳ್ಳಲು ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಸರ್ಕಾರವು ಅನುಮತಿ ನೀಡಿದೆ.

1) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ಕಾರ್ಯನಿರ್ವಹಿಸುವುದು.
2) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು
3) ಕೆರೆಯಲ್ಲಿ ಕನಿಷ್ಠ ಮಟ್ಟದವರೆಗೆ ನೀರು ಶೇಖರಣೆಯಾಗುವವರೆಗೂ ಕೆರೆಯಿಂದ ನೀರನ್ನು ಬಳಸಬಾರದು.
4) ವೈ.ಜಿ.ಗುಡ್ಡ ಸಣ್ಣ ನೀರಾವರಿ ಕೆರೆಯಿಂದ ಕುಡಿಯುವ ನೀರಿಗೆ ಉಪಯೋಗಿಸಿಕೊಳ್ಳುವ ನೀರಿನ ಪ್ರಮಾಣವನ್ನು ವಾರ್ಷಿಕ 21 ಎಂ.ಸಿ.ಎಫ್.ಟಿ. ಗೆ ಸೀಮಿತಗೊಳಿಸಬೇಕು. ಇದಕ್ಕಾಗಿ ಪರಿಮಾಣವನ್ನು ಅಳೆಯುವ ಮಾಪಕವನ್ನು ಅಳವಡಿಸಿ ಕಾಲಕಾಲಕ್ಕೆ ನೀರಿನ ಪ್ರಮಾಣವನ್ನು ಅಳತೆ ಮಾಡುವುದು ಹಾಗೂ ಇದನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಪರಿವೀಕ್ಷಿಸಲು ಅವಕಾಶ ನೀಡುವುದು.
5) ಉಪಯೋಗಿಸಲ್ಪಡುವ ನೀರಿನ ಪರಿಮಾಣವನ್ನು ಒಂದು ರಿಜಿಸ್ಟರ್‌ನಲ್ಲಿ ದಾಖಲಿಸುವುದು ಹಾಗೂ ಇದನ್ನು ಸಣ್ಣ ನೀರಾವರಿ ಇಲಾಖೆಯ ಅಧಿಕಾರಿಗಳು ಕಾಲಕಾಲಕ್ಕೆ ಪರಿಶೀಲಿಸಿ ಮೇಲು ಸಹಿ ಮಾಡುವುದು.
6) ನೀರು ಸರಬರಾಜು ಯೋಜನೆಯ ನೀಲಿ ನಕ್ಷೆಯನ್ನು ಪಡೆದು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.
7) ಮೇಲೆ ತಿಳಿಸಿರುವ ಎಲ್ಲಾ ನಿಬಂಧನೆಗಳನ್ನೊಳಗೊಂಡ ಒಂದು ತಿಳುವಳಿಕೆ ಪತ್ರವನ್ನು ತಯಾರಿಸಿ ಅದಕ್ಕೆ ಸಂಬಂಧಪಟ್ಟ ಜಿಲ್ಲಾ ಪಂಚಾಯತ್ ಇಂಜಿನಿಯರ್ ವಿಭಾಗದ ಅಧಿಕಾರಿಗಳು ಹಾಗೂ ಸಣ್ಣ ನೀರಾವರಿ ವಿಭಾಗದ ಕಾರ್ಯಪಾಲಕ ಇಂಜಿನಿಯರ್ ರವರು ಜಂಟಿಯಾಗಿ ಸಹಿ ಮಾಡಿ ಅದರ ಮೂಲ ಪ್ರತಿಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ದಾಖಲಿಸುವುದು.
8) ಕೆರೆಯ ವಾರ್ಷಿಕ ನಿರ್ವಹಣೆಗೆ ತಗಲುವ ಶೇ. 25 ರಷ್ಟು ವೆಚ್ಚವನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗವು ಭರಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 860

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಮಲಿಕವಾಡ ಗ್ರಾಮದ ಏತ ನೀರಾವರಿ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ :** ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ, ಬೆಳಗಾವಿರವರ ಪತ್ರದ ಸಂಖ್ಯೆ:ಅಅ:ಸನೀವೃ/ಬೆ/ಎಇ–4/2010–11/1258, ದಿನಾಂಕ 17–02–2011 ಮತ್ತು ದಿನಾಂಕ 18–03–2011ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪುರ ಇವರ ಪ್ರಸ್ತಾವನೆ.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಮಲಿಕವಾಡ ಗ್ರಾಮದ ಏತ ನೀರಾವರಿ ಯೋಜನೆಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ನಬಾರ್ಡ್‌ನ ಆರ್.ಐ.ಡಿ.ಎಫ್. 6 ರಡಿಯಲ್ಲಿ ನಿರ್ಮಿಸಲಾಗಿರುತ್ತದೆ. ಪ್ರಸ್ತುತ ಸದರಿ ಯೋಜನೆಯ ವ್ಯಾಪ್ತಿಗೆ ಒಳಪಡುವ ಯೋಜಿತ ಅಚ್ಚುಕಟ್ಟು ಪ್ರದೇಶದಲ್ಲಿನ ಅಚ್ಚುಕಟ್ಟುದಾರರಿಂದ ನೀರಾವರಿಗೆ ಬೇಡಿಕೆ ಇರುವುದಿಲ್ಲವೆಂದು ವರದಿಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಸದ್ಬಳಕೆ ಮಾಡುವ ಉದ್ದೇಶದಿಂದ ಈ ಯೋಜನೆಯಿಂದ ಚಿಕ್ಕೋಡಿ ತಾಲ್ಲೂಕಿನಿಂದ 3 ಕೆರೆಗಳಿಗೆ ಅಂದರೆ 1) ವಡಗೋಳ ಕೆರೆ, 2) ಬೈನಾಕವಾಡಿ ಕೆರೆ ಹಾಗೂ 3) ಯದ್ಯಾನವಾಡಿ ಕೆರೆಗಳಿಗೆ ನೀರು ತುಂಬಿಸುವ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಯು ಕೈಗೊಳ್ಳಲು ಉದ್ದೇಶಿಸಿರುವುದಾಗಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪುರ ರವರು ದಿನಾಂಕ 18–03–2011ರ ಪ್ರಸ್ತಾವನೆಯಲ್ಲಿ ತಿಳಿಸಿ ಈ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಈ ಏತ ನೀರಾವರಿ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಗೆ ವರ್ಗಾಯಿಸುವುದು ಅವಶ್ಯವಿರುತ್ತದೆ.

ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 03 ಏನೀಯೋ 2011, ಬೆಂಗಳೂರು, ದಿನಾಂಕ : 18–03–2011**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಮಲಿಕವಾಡ ಗ್ರಾಮದ ಏತ ನೀರಾವರಿ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 861 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಮತ್ತು (ಉತ್ತರ) ವಲಯ, ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಛೇರಿಗಳ ಉಪಯೋಗಕ್ಕಾಗಿ ಹೊಸ ವಾಹನಗಳನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ತಾಂ.ಸ–6/ಸ.ಇಂ:14/ಹೊಸ ವಾಹನಗಳು/2010–11/3774, ದಿನಾಂಕ 27–12–2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ಉತ್ತರ ವಲಯ), ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–10/ಹೊಸ ವಾಹನ ಪೂರೈಕೆ/2010–11/6844, ದಿನಾಂಕ 31–12–2010.

**ಪ್ರಸ್ತಾವನೆ :**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಇವರ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ 27–12–2010ರ ಪತ್ರದಲ್ಲಿ ಸಣ್ಣ ನೀರಾವರಿ, ದಕ್ಷಿಣ ವಲಯದ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ವೃತ್ತ, ಬೆಂಗಳೂರು. ಸಣ್ಣ ನೀರಾವರಿ ವಿಭಾಗಗಳು ಹಾಗೂ ಉಪ ವಿಭಾಗಗಳ ಕಛೇರಿಗಳಿಗೆ ಒದಗಿಸುವ ವಾಹನಗಳು ಬಹಳ ಹಳೆಯದಾಗಿದ್ದು, ಆಗಿಂದಾಗ್ಗೆ ದುರಸ್ತಿಗೆ ಬರುತ್ತಿರುವ ಕಾರಣ ಮತ್ತು ಇನ್ನೂ ಕೆಲವು ವಿಭಾಗ ಮತ್ತು ಉಪ ವಿಭಾಗಗಳಿಗೆ ವಾಹನಗಳಿಲ್ಲದ ಕಾರಣ 5 ಕಾರು ಮತ್ತು 5 ಟಾಟಾ ಸುಮೋ ವಾಹನಗಳನ್ನು ಖರೀದಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ 31–12–2010ರ ಪತ್ರದಲ್ಲಿ ಸಣ್ಣ ನೀರಾವರಿ, ಉತ್ತರ ವಲಯದ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ವೃತ್ತ, ವಿಭಾಗಗಳು ಹಾಗೂ ಉಪ ವಿಭಾಗಗಳ ಕಛೇರಿಗಳಿಗೆ ಒದಗಿಸಿರುವ ವಾಹನಗಳು ಬಹಳ ಹಳೆಯದಾಗಿದ್ದು, ಆಗಿಂದಾಗ್ಗೆ ರಿಪೇರಿಗೆ ಬರುತ್ತಿರುವ ಕಾರಣ 7 ಕಾರು ಮತ್ತು 19 ಟಾಟಾ ಸುಮೋ ವಾಹನಗಳನ್ನು ಖರೀದಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರು ಮತ್ತು ಉತ್ತರ ವಲಯ, ಬಿಜಾಪುರ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 240 ಮಸಾವಿ 2010, ಬೆಂಗಳೂರು, ದಿನಾಂಕ : 23-03-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ ಮತ್ತು ಉತ್ತರ ವಲಯಗಳ ವ್ಯಾಪ್ತಿಯಲ್ಲಿ ಬರುವ ವೃತ್ತ, ವಿಭಾಗಗಳು ಹಾಗೂ ಉಪ ವಿಭಾಗಗಳ ಕಛೇರಿಗಳ ಉಪಯೋಗಕ್ಕಾಗಿ ಒಟ್ಟು 7 ವಾಹನಗಳನ್ನು ಅಂದಾಜು ವೆಚ್ಚ ರೂ. 30.55 ಲಕ್ಷಗಳಲ್ಲಿ ಖರೀದಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ ಇವರಿಗೆ ಮಂಜೂರಾತಿ ನೀಡಿದೆ.

ಈ 7 ವಾಹನಗಳ ಖರೀದಿಗೆ ತಗಲುವ ವೆಚ್ಚವನ್ನು 2010-11ನೇ ಸಾಲಿಗೆ ಲೆಕ್ಕಶೀರ್ಷಿಕೆ 2702-80-052-01-221 (ಯೋಜನೇತರ) ಸಾಮಗ್ರಿ ಮತ್ತು ಸರಬರಾಜು ರಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 47 ಅಕೋ-1/11, ದಿನಾಂಕ 21-03-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 862 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** 2010-11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ **"4702-139-ಪ್ರಧಾನ ಕಾಮಗಾರಿಗಳು ಹಾಗೂ ವಿಶೇಷ ಅಭಿವೃದ್ಧಿ ಯೋಜನೆ 2702-ಸಮೀಕ್ಷಾ ಕಾರ್ಯಗಳು"** ಯೋಜನೆ ಅಡಿಯಲ್ಲಿ ಒದಗಿಸಿರುವ ಅನುದಾನವನ್ನು ಮರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 35 ಆವಿಸಂ 2010, ದಿನಾಂಕ 04-05-2010
2. ಸರ್ಕಾರದ ಆದೇಶ ಸಂಖ್ಯೆ: ಸನೀಇ 01 ಆವಿಸಂ 2011, ದಿನಾಂಕ 19-01-2011
3. ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಆವಿಸಂ 2010, ದಿನಾಂಕ 18-06-2010 ಹಾಗೂ 11-03-2011.
4. ಸರ್ಕಾರದ ಆದೇಶ ಸಂಖ್ಯೆ: ಸನೀಇ 44 ಆವಿಸಂ 2010, ದಿನಾಂಕ 29-10-2010

**ಪ್ರಸ್ತಾವನೆ :**

2010-11ನೇ ಸಾಲಿನ ನೀರಾವರಿಯ ಸವಿವರ ವೆಚ್ಚ ಅಂದಾಜುಗಳ ಆಯವ್ಯಯದಲ್ಲಿ ಸಣ್ಣ ನೀರಾವರಿ ಇಲಾಖೆಗೆ ಲೆಕ್ಕಶೀರ್ಷಿಕೆ **"4702-139 ಪ್ರಧಾನ ಕಾಮಗಾರಿಗಳು, ವಿಶೇಷ ಅಭಿವೃದ್ಧಿ ಯೋಜನೆ ಹಾಗೂ 2702-ಸಮೀಕ್ಷಾ ಕಾರ್ಯಗಳು"** ಅಡಿಯಲ್ಲಿ ನೀಡಿದ್ದ ಅನುದಾನವನ್ನು ಇತರ ಲೆಕ್ಕ ಶೀರ್ಷಿಕೆ ಅನುದಾನದೊಂದಿಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ (ಉತ್ತರ) ವಲಯ ಬಿಜಾಪುರ ಹಾಗೂ ಸಣ್ಣ ನೀರಾವರಿ (ದಕ್ಷಿಣ) ವಲಯ ಬೆಂಗಳೂರು ರವರಿಗೆ ಮೇಲೆ ಓದಲಾದ ಸರ್ಕಾರದ ಆದೇಶಗಳಲ್ಲಿ ಹಂಚಿಕೆ ಮಾಡಲಾಗಿರುತ್ತದೆ. ಆದರೆ ಪ್ರಸ್ತುತ ವಾಸ್ತವಿಕ ಅವಶ್ಯಕತೆಗೆ ತಕ್ಕಂತೆ ಬಾಕಿ ಬಿಲ್ಲುಗಳು/ವೆಚ್ಚವನ್ನು ಆದರಿಸಿ ಕೆಳಕಂಡ ಶೀರ್ಷಿಕೆಗಳಲ್ಲಿ ಅನುದಾನವನ್ನು ಮರು ಹಂಚಿಕೆ ಮಾಡಲು ಪರಿಗಣಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಲೆಕ್ಕ ಶೀರ್ಷಿಕೆ | ಒಟ್ಟು ಅನುದಾನ | ಈ ಹಿಂದೆ ನೀಡಿರುವ ಅನುದಾನದ ಹಂಚಿಕೆ | | ಈಗ ನೀಡುತ್ತಿರುವ ಮರು ಹಂಚಿಕೆ | |
|---|---|---|---|---|---|---|
| | | | ದಕ್ಷಿಣ ವಲಯ ಬೆಂಗಳೂರು | ಉತ್ತರ ವಲಯ ಬಿಜಾಪುರ | ದಕ್ಷಿಣ ವಲಯ ಬೆಂಗಳೂರು | ಉತ್ತರ ವಲಯ ಬಿಜಾಪುರ |
| 1 | 2 | 3 | 4 | 5 | 6 | 7 |
| 1 | 4702-00-101-1-02-139 ನೀರಾವರಿ ಕೆರೆಗಳು-ಹೊಸ ಕೆರೆಗಳು, ಪಿಕಪ್‌ಗಳ ನಿರ್ಮಾಣ | 1,434-00 (ಇದರಲ್ಲಿ ಮರು ಹೊಂದಾಣಿಕೆ ಮಾಡಿದ ರೂ. 50 ಲಕ್ಷ ಕಳೆಯಲಾಗಿದೆ) | 162.08 | 1271.92 | 249.65 | 1184.35 |
| 2 | 4702-00-800-8-00-133 ವಿಶೇಷ ಅಭಿವೃದ್ಧಿ ಯೋಜನೆ | 5,000.00 | 1861.64 | 3138.36 | 1721.71 | 3278.29 |
| 3 | 2702-80-800-0-01-132 ಸಮೀಕ್ಷಾ ಕಾರ್ಯಗಳು | 1,000.00 | 714.50 | 285.50 | 754.00 | 246.00 |

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೇಲ್ಕಂಡ ತಃಖ್ತೆಯಲ್ಲಿ ತಿಳಿಸಿರುವಂತೆ ಅನುದಾನವನ್ನು ಮರು ಹಂಚಿಕೆ ಮಾಡಲು ಆದೇಶವನ್ನು ಹೊರಡಿಸಲು ಪರಿಗಣಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 01 ಆವಿಸಂ 2011, ಬೆಂಗಳೂರು, ದಿನಾಂಕ : 23-03-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010-11ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "4702-00-101-0-02-139 ನೀರಾವರಿ ಕೆರೆಗಳು-ಹೊಸ ಕೆರೆಗಳು, ಪಿಕಪ್‌ಗಳ ನಿರ್ಮಾಣ" ಲೆಕ್ಕಶೀರ್ಷಿಕೆ "4702-00-800-8-00-133 ವಿಶೇಷ ಅಭಿವೃದ್ಧಿ ಯೋಜನೆ" ಹಾಗೂ "2702-80-800-0-01-132 ಸಮೀಕ್ಷಾ ಕಾರ್ಯಗಳು" ಗಳಡಿ ತಃಖ್ತೆಯಲ್ಲಿ ತಿಳಿಸಿರುವಂತೆ ಮರು ಹಂಚಿಕೆ ಮಾಡಿ ಸರ್ಕಾರವು ಅನುಮೋದನೆ ನೀಡಿದೆ.

ಈ ಮೊತ್ತವನ್ನು ಮರು ಹಂಚಿಕೆ ಮಾಡಿದ ಲೆಕ್ಕಶೀರ್ಷಿಕೆಯ ಬಾಬ್ತಿಗೆ ಮಾತ್ರ ವೆಚ್ಚ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 863 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಸಮಗ್ರ ಶಿಶು ಸಂರಕ್ಷಣಾ ಯೋಜನೆಯ ಲೆಕ್ಕಶೀರ್ಷಿಕೆ 2235-02-800-0-02-059ಗೆ ಹಾಲಿ ಚಾಲ್ತಿಯಲ್ಲಿರುವ ಲೆಕ್ಕಶೀರ್ಷಿಕೆಗಳು/ಯೋಜನೆಗಳನ್ನು ವಿಲೀನಗೊಳಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ 15-06-2010ರ ಆದೇಶ ಸಂಖ್ಯೆ: ಮಮಇ 71 ಮಭಾಬ 2009

2. ದಿನಾಂಕ 14-12-2010ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಏಕ ಕಡತ ಸಂಖ್ಯೆ: ಮಮಅಇ/ಯೋಜನೆ/36/2010-11.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳನ್ವಯ ಕೇಂದ್ರ ಸರ್ಕಾರದ ಸಮಗ್ರ ಶಿಶು ಸಂರಕ್ಷಣಾ ಯೋಜನೆಯನ್ನು ಕೇಂದ್ರ ಸರ್ಕಾರದೊಡನೆ ಮಾಡಿಕೊಂಡಿರುವ ದಿನಾಂಕ 21-03-2010ರ ಒಪ್ಪಂದದನ್ವಯ ಬಾಲನ್ಯಾಯ ಕಾಯ್ದೆ (ಕೇಂದ್ರ ಪುರಸ್ಕೃತ ಕಾರ್ಯಕ್ರಮ) ಸಮಗ್ರ ಬೀದಿ ಮಕ್ಕಳ ಕಾರ್ಯಕ್ರಮ, ದತ್ತು ಕಾರ್ಯಕ್ರಮ (ಶಿಶು ಗೃಹ) ಮಕ್ಕಳ ಸಹಾಯವಾಣಿ ಯೋಜನೆಗಳನ್ನು ಒಂದುಗೂಡಿಸಿ ಅನುಷ್ಠಾನಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರಿಗೆ ಮಂಜೂರಾತಿ ನೀಡಲಾಗಿದೆ.

ಕೇಂದ್ರ ಪುರಸ್ಕೃತ ಯೋಜನೆಯಾದ ಸಮಗ್ರ ಶಿಶು ಸಂರಕ್ಷಣಾ ಯೋಜನೆಯ ಮಾರ್ಗಸೂಚಿಯಂತೆ ಹಾಲಿ ಚಾಲ್ತಿಯಲ್ಲಿರುವ ಕೆಳಕಂಡ ಯೋಜನೆಗಳನ್ನು ಹಾಗೂ ಸಂಬಂಧಪಟ್ಟ ಲೆಕ್ಕಶೀರ್ಷಿಕೆಗಳನ್ನು 2011-12ನೇ ಸಾಲಿಗೆ ಐ.ಸಿ.ಪಿ.ಎಸ್. ಯೋಜನೆಯ ಲೆಕ್ಕಶೀರ್ಷಿಕೆಯಡಿಯಲ್ಲಿ ವಿಲೀನಗೊಳಿಸಲು ಅನುಮತಿ ನೀಡುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಏಕ ಕಡತ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

| ಕ್ರ.ಸಂ. | ಕಾರ್ಯಕ್ರಮ | ಯೋಜನೆ | ಯೋಜನೇತರ | ಲೆಕ್ಕ ಶೀರ್ಷಿಕೆ |
|---|---|---|---|---|
| 1 | ಎ ಪ್ರೋಗ್ರಾಂ ಫಾರ್ ಜುವೆನೈಲ್ ಜಸ್ಟೀಸ್ | ಯೋಜನೆ | - | 2235-02-106-0-10 |
| 2 | ಮಕ್ಕಳನ್ನು ಕುಟುಂಬ ವಾತಾವರಣದಲ್ಲಿ ಬೆಳೆಸಲು ಪ್ರಾಯೋಜಿತ ಕಾರ್ಯಕ್ರಮ | ಯೋಜನೆ | - | 2235-02-106-0-13-059 |
| 3 | ಸುಧಾರಣಾ ಸಂಸ್ಥೆಗಳ ನಿವಾಸಿಗಳಿಗೆ ವಿವಿಧ ಕೌಶಲ್ಯತೆಗಳಲ್ಲಿ ತರಬೇತಿ | ಯೋಜನೆ | - | 2235-02-106-0-14-059 |
| 4 | ಮಕ್ಕಳ ಸಹಾಯವಾಣಿ | ಯೋಜನೆ | - | 2235-02-102-0-32 |
| 5 | ಬಾಲಮಂದಿರಗಳು ಮತ್ತು ಪ್ರತಿಪ್ರೇಕ್ಷಣಾ ಗೃಹಗಳು | - | ಯೋಜನೇತರ | 2235-02-106-0-08 |

**ಸರ್ಕಾರದ ಆದೇಶ ಸಂಖ್ಯೆ : ಮಮಇ 246 ಮಭಾಬ 2010, ಬೆಂಗಳೂರು, ದಿನಾಂಕ : 23-03-2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, 2011-12ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಾದ ಸಮಗ್ರ ಶಿಶು ಸಂರಕ್ಷಣಾ ಯೋಜನೆ (ಐ.ಸಿ.ಪಿ.ಎಸ್.)ಯ ಲೆಕ್ಕಶೀರ್ಷಿಕೆ 2235-02-800-0-02-059 ಅಡಿಯಲ್ಲಿ ಹಾಲಿ ಇರುವ ಕೆಳಕಂಡ ಲೆಕ್ಕಶೀರ್ಷಿಕೆ/ಯೋಜನೆಗಳನ್ನು ವಿಲೀನಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಾರ್ಯಕ್ರಮ |
|---|---|---|
| 1 | 2235-02-106-0-10 | ಎ ಪ್ರೋಗ್ರಾಂ ಫಾರ್ ಜುವೆನೈಲ್ ಜಸ್ಟೀಸ್ |
| 2 | 2235-02-106-0-13-059 | ಮಕ್ಕಳನ್ನು ಕುಟುಂಬ ವಾತಾವರಣದಲ್ಲಿ ಬೆಳೆಸಲು ಪ್ರಾಯೋಜಿತ ಕಾರ್ಯಕ್ರಮ |
| 3 | 2235-02-106-0-14-059 | ಸುಧಾರಣಾ ಸಂಸ್ಥೆಗಳ ನಿವಾಸಿಗಳಿಗೆ ವಿವಿಧ ಕೌಶಲ್ಯತೆಗಳಲ್ಲಿ ತರಬೇತಿ |
| 4 | 2235-02-102-0-32 | ಮಕ್ಕಳ ಸಹಾಯವಾಣಿ |
| 5 | 2235-02-106-0-08 | ಬಾಲಮಂದಿರಗಳು ಮತ್ತು ಪ್ರತಿಪ್ರೇಕ್ಷಣಾ ಗೃಹಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 827 ವೆಚ್ಚ–3/10, ದಿನಾಂಕ 01–03–2011ರ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಪಿ.ಆರ್. 864 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

ತಿದ್ದುಪಡಿ

ಸಂಖ್ಯೆ: ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ 14–03–2011

ಆದೇಶ ಸಂಖ್ಯೆ: ಮಮಇ 206 ಮಭಾಬ 2010, ದಿನಾಂಕ 14–10–2010ರ ಅನುಬಂಧ–2 ರಲ್ಲಿನ ಕ್ರಮ ಸಂಖ್ಯೆ 1 ರಲ್ಲಿ "ಮೆಟ್ರೋ ಪಾಲಿಟನ್ ಮ್ಯಾಜಿಸ್ಟ್ರೇಟ್" ಬದಲಿಗೆ "ಚೀಫ್ ಮೆಟ್ರೋ ಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು ನಗರ" ಎಂದು, ಕ್ರಮ ಸಂಖ್ಯೆ (2) ರಲ್ಲಿ "ಮೆಟ್ರೋ ಪಾಲಿಟನ್ ಮ್ಯಾಜಿಸ್ಟ್ರೇಟ್" ಬದಲಿಗೆ "ಚೀಫ್ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್, ಬೆಂಗಳೂರು ಗ್ರಾಮಾಂತರ, ಬೆಂಗಳೂರು" ಎಂದು, ಕ್ರಮ ಸಂಖ್ಯೆ (19)ರಲ್ಲಿ "ಮೆಟ್ರೋಪಾಲಿಟಿನ್ ಮ್ಯಾಜಿಸ್ಟ್ರೇಟ್, ಕೋಲಾರ" ಬದಲಿಗೆ "ಪ್ರಿನ್ಸಿಪಲ್ ಸೀನಿಯರ್ ಸಿವಿಲ್ ಜಡ್ಜ್ ಅಂಡ್ ಪ್ರಿನ್ಸಿಪಾಲ್, ಜೆ.ಎಂ.ಎಫ್.ಸಿ., ಕೆ.ಜಿ.ಎಫ್" ಎಂದು ಹಾಗೂ ಉಳಿದ ಕ್ರಮ ಸಂಖ್ಯೆಗಳ ಜಿಲ್ಲೆಗಳಲ್ಲಿನ "ಮೆಟ್ರೋಪಾಲಿಟಿನ್ ಮ್ಯಾಜಿಸ್ಟ್ರೇಟ್" ಬದಲಿಗೆ "ಪ್ರಿನ್ಸಿಪಾಲ್ ಸೀನಿಯರ್ ಸಿವಿಲ್ ಜಡ್ಜ್ ಮತ್ತು ಸಿ.ಜೆ.ಎಂ" ಎಂದು ತಿದ್ದಿ ಓದಿಕೊಳ್ಳತಕ್ಕದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಪಿ.ಆರ್. ನಂ. 865 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳನ್ನು ಪ್ರಾಯೋಗಿಕವಾಗಿ ಅನುಷ್ಠಾನ ಸಂಸ್ಥೆಗಳನ್ನಾಗಿ ಪರಿಗಣಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ : 12–10–2010 ರಂದು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
2. ದಿನಾಂಕ: 07–01–2011 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದ ರೀತ್ಯಾ.
3. ಸರ್ಕಾರದ ಆದೇಶ ಸಂ.ಗ್ರಾಅಪ: 167: ಉಪಾಯೋ: 2010 ಬೆಂಗಳೂರು, ದಿನಾಂಕ: 19.02.2011.

**ಪ್ರಸ್ತಾವನೆ:**

ಸರ್ಕಾರವು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳ ಚಟುವಟಿಕೆಗಳನ್ನು ಆಯಾ ಇಲಾಖೆಯ ಅನುಷ್ಠಾನಾಧಿಕಾರಿಗಳು ತಾವೇ ಸ್ವತಂತ್ರವಾಗಿ ಋತುಮಾನಕ್ಕೆ ಅನುಗುಣವಾಗಿ ಅನುಷ್ಠಾನಗೊಳಿಸಲು ಸದರಿ ಇಲಾಖೆಗಳನ್ನು ಪಂಚಾಯತ್ ರಾಜ್ ಸಂಸ್ಥೆಗಳ ಜೊತೆಗೆ ಅನುಷ್ಠಾನ ಸಂಸ್ಥೆಗಳೆಂದು ಪರಿಗಣಿಸಿ ಪ್ರಾಯೋಗಿಕವಾಗಿ ಪ್ರಾಥಮಿಕ ಹಂತದಲ್ಲಿ ರಾಜ್ಯದ ಏಳು ಜಿಲ್ಲೆಗಳಲ್ಲಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಉಲ್ಲೇಖ (3)ರಲ್ಲಿ ಆದೇಶಿಸಿದ್ದು, ಈಗ ರಾಯಚೂರು ಜಿಲ್ಲೆಯಲ್ಲಿ ಸದರಿ ಇಲಾಖೆಗಳ ಚಟುವಟಿಕೆಗಳನ್ನು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಆಯಾ ಇಲಾಖೆಯ ಅನುಷ್ಠಾನಾಧಿಕಾರಿಗಳು ಸ್ವತಂತ್ರವಾಗಿ ನಿರ್ವಹಿಸಲು ಮತ್ತು ಯೋಜನೆಯ ಅನುಷ್ಠಾನದಲ್ಲಿ ಅನುಸರಿಸುವ ಪ್ರಕ್ರಿಯೆಗಳಲ್ಲಿ ಆಗುವ ವಿಳಂಬವನ್ನು ತಪ್ಪಿಸಲು ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳನ್ನು ಅನುಷ್ಠಾನ ಸಂಸ್ಥೆಗಳನ್ನಾಗಿ ಪರಿಗಣಿಸಿ ಆದೇಶಿಸುವಂತೆ ಕೋರಿರುತ್ತಾರೆ. ಆದುದರಿಂದ ಸರ್ಕಾರವು ಈ ಸಂಬಂಧ ಪಂಚಾಯತ್ ರಾಜ್ ಸಂಸ್ಥೆಗಳ ಜೊತೆಗೆ ರಾಯಚೂರು ಜಿಲ್ಲೆಯಲ್ಲಿ ತೋಟಗಾರಿಕೆ ಮತ್ತು ಅರಣ್ಯ ಇಲಾಖೆಗಳನ್ನು ಅನುಷ್ಠಾನ ಸಂಸ್ಥೆಗಳೆಂದು ಪ್ರಾಯೋಗಿಕವಾಗಿ ಪರಿಗಣಿಸಲು ತೀರ್ಮಾನಿಸಿದೆ ಆದುದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ: ಗ್ರಾಅಪ: 167: ಉಖಾಯೋ: 2010 ಬೆಂಗಳೂರು, ದಿನಾಂಕ 10–3–2011**

ಮೇಲ್ಕಂಡ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಪಂಚಾಯತ್ ರಾಜ್ ಸಂಸ್ಥೆಗಳು ಸೇರಿದಂತೆ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನವನ್ನು ರಾಯಚೂರು ಜಿಲ್ಲೆಯಲ್ಲಿ ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳನ್ನು ಪ್ರಾಯೋಗಿಕವಾಗಿ ಅನುಷ್ಠಾನ ಸಂಸ್ಥೆಗಳೆಂದು ಗುರುತಿಸಿ ಸಂಬಂಧಪಟ್ಟ ಇಲಾಖೆಗಳಿಗೆ ನಿಗದಿಪಡಿಸಿದ ಕಾಮಗಾರಿಗಳ ಅನುಷ್ಠಾನ ಕಾರ್ಯವನ್ನು ಮಾರ್ಗಸೂಚಿಗಳನ್ವಯ ಹಾಗೂ ಈ ಕೆಳಕಂಡ ನಿಯಮಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಕಟ್ಟುನಿಟ್ಟಾಗಿ ಪಾಲಿಸಲು ಈ ಮೂಲಕ ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಅನುಷ್ಠಾನ ಸಂಸ್ಥೆ | ಅನುಷ್ಠಾನಾಧಿಕಾರಿ |
|---|---|---|---|
| 1 | ರಾಯಚೂರು | 1. ಅರಣ್ಯ ಇಲಾಖೆ<br>2. ತೋಟಗಾರಿಕೆ ಇಲಾಖೆ | 1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ರಾಯಚೂರು<br>2. ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ, ರಾಯಚೂರು |

1. ಅನುಷ್ಠಾನ ಸಂಸ್ಥೆಗಳು ಯೋಜನೆಯಡಿ ತಮ್ಮ ಇಲಾಖಾ ವತಿಯಿಂದ ಕೈಗೆತ್ತಿಕೊಳ್ಳಬಹುದಾದ ಕಾಮಗಾರಿಗಳನ್ನು ಯೋಜನೆಯ ಮಾರ್ಗಸೂಚಿಗಳನ್ವಯ ಸಂಬಂಧಪಟ್ಟ ಗ್ರಾಮ ಸಭೆಗಳಲ್ಲಿ ಪ್ರಸ್ತಾಪಿಸಿ ಗ್ರಾಮ ಸಭೆಗಳ ಶಿಫಾರಸ್ಸಿನೊಂದಿಗೆ ನಿಯಮಾನುಸಾರ ಸೂಕ್ತ ಅನುಮೋದನೆ ಪಡೆದು ಕಾಮಗಾರಿ ಗುಚ್ಚದಲ್ಲಿ ಸೇರಿಸತಕ್ಕದ್ದು.
2. ಅರಣ್ಯ ಮತ್ತು ತೋಟಗಾರಿಕೆ ಇಲಾಖೆಗಳ ಕಾಮಗಾರಿಗಳು ಋತುಮಾನಾಧಾರಿತ ಕಾಮಗಾರಿಗಳಾಗಿರುವುದರಿಂದ ಅಂತಹ ಕಾಮಗಾರಿಗಳನ್ನು ಗ್ರಾಮ ಪಂಚಾಯತಿಯವರು ಕೈಗೆತ್ತಿಕೊಂಡಿದ್ದರೆ ಗ್ರಾಮಸಭೆಯ ಮೂಲಕ ಗ್ರಾಮ ಪಂಚಾಯತಿಯಿಂದ ಕ್ರಿಯಾ ಯೋಜನೆಯನ್ನು ಅನುಮೋದಿಸತಕ್ಕದ್ದು. ಇದೇ ರೀತಿ ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಯವರು ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದರೆ ಕ್ರಿಯಾಯೋಜನೆಗೆ ತಾಲ್ಲೂಕು ಪಂಚಾಯತಿ/ಜಿಲ್ಲಾ ಪಂಚಾಯತಿಯವರು ಅನುಮೋದನೆ ನೀಡತಕ್ಕದ್ದು.
3. ಸದರಿ ಅನುಮೋದಿತ ಕಾಮಗಾರಿಗಳ ಸಂಬಂಧ ಯೋಜನೆಯಡಿ ನೀಡಲಾಗಿರುವ ಅಧಿಕಾರಗಳನ್ವಯ ಕಾಮಗಾರಿ ಅಂದಾಜು ಪಟ್ಟಿಗಳನ್ನು ತಯಾರಿಸಿ ತಾಂತ್ರಿಕ ಮತ್ತು ಆಡಳಿತಾತ್ಮಕ ಮಂಜೂರಾತಿಯನ್ನು ಪಡೆದಿರತಕ್ಕದ್ದು.
4. ಯೋಜನೆಯಡಿ ಸಲ್ಲಿಸಲಾಗುವ ಉದ್ಯೋಗ ಬೇಡಿಕೆಗೆ ಅನುಗುಣವಾಗಿ ಗ್ರಾಮ ಪಂಚಾಯತಿಯ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಇವರು ಸದರಿ ಇಲಾಖೆಗಳ ಅನುಮೋದಿತ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಕಾಮಗಾರಿಗಳನ್ನು ಹಂಚಿಕೆ ಮಾಡಿ ಅದಕ್ಕೆ ಅಗತ್ಯವಾಗಿ ಬೇಕಾಗಿರುವ NMRಗಳನ್ನು MIS ಮೂಲಕ ಸಂಬಂಧಪಟ್ಟ ಅನುಷ್ಠಾನ ಸಂಸ್ಥೆಗಳಿಗೆ ವಿತರಿಸುವುದು.
5. ಅನುಷ್ಠಾನ ಸಂಸ್ಥೆಗಳಿಗೆ ಯೋಜನೆ ಅನುಷ್ಠಾನದಲ್ಲಿರುವ ಎಲ್ಲ ಪ್ರಕ್ರಿಯೆಗಳನ್ನು MIS ನಲ್ಲಿ ಅಳವಡಿಸಲು ಒಂದು ಪ್ರತ್ಯೇಕ login ಅವಕಾಶ ಕಲ್ಪಿಸಲಾಗಿರುತ್ತದೆ. ಸದರಿ login ಬಳಕೆ ಮಾಡಿಕೊಂಡು ಅನುಷ್ಠಾನ ಸಂಸ್ಥೆಗಳು ಗ್ರಾಮ ಪಂಚಾಯತಿಯ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಇವರು ವಿತರಿಸಿರುವ NMR ಗಳನ್ನು ಪಡೆಯಬಹುದಾಗಿದೆ.
6. MIS ನಿಂದ ಪಡೆದ NMR ಗಳನ್ನು ಕಾಮಗಾರಿ ನಿರ್ವಹಣೆಯಲ್ಲಿ ಬಳಸಿದ ನಂತರ ಸದರಿ ಮಾಹಿತಿಯನ್ನು MIS ನಲ್ಲಿ ಭರ್ತಿ ಮಾಡಲು ನಂತರ ಕೂಲಿ ಪಾವತಿಗಾಗಿ wage list ಮುದ್ರಿಸಲು ಹಾಗೂ ಕೂಲಿ ಪಾವತಿ ಮಾಡುವ ಸಂಪೂರ್ಣ ಜವಾಬ್ದಾರಿ ಅನುಷ್ಠಾನ ಸಂಸ್ಥೆಯದಾಗಿರುತ್ತದೆ.
7. ಸದರಿ ಕಾಮಗಾರಿಗೆ ಅನುಮೋದಿತ ಅಂದಾಜು ಪಟ್ಟಿಯಂತೆ ಅಗತ್ಯವಾಗಿ ಬೇಕಾಗಿರುವ ಸಾಮಗ್ರಿಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಗಳನ್ವಯ ಖರೀದಿ ಮಾಡಿ ಕಾಮಗಾರಿಯಲ್ಲಿ ಬಳಸಲು ಮತ್ತು ಪೂರ್ಣ ಸಾಮಗ್ರಿ ವಿವರಗಳನ್ನು ಹಾಗೂ ಪಾವತಿ ವಿವರಗಳನ್ನು ಕಡ್ಡಾಯವಾಗಿ MIS ನಲ್ಲಿ ದಾಖಲಿಸುವುದು ಅನುಷ್ಠಾನ ಅಧಿಕಾರಿಯವರ ಜವಾಬ್ದಾರಿಯಾಗಿರುತ್ತದೆ.
8. ಸದರಿ ಕಾಮಗಾರಿಗಳಿಗೆ ಸಂಬಂಧಪಟ್ಟ ಹಣ ಪಾವತಿಗೆ ಮುನ್ನ ನಿಯಮಾನುಸಾರ ಅನುಮೋದಿತ ಅಂದಾಜು ಪಟ್ಟಿಯನ್ವಯ ಹಾಗೂ ಕಾಮಗಾರಿ ನಿರ್ವಹಣೆ ಅನುಸಾರ ಅಳತೆ ಪುಸ್ತಕದಲ್ಲಿ ದಾಖಲಿಸುವುದು ಹಾಗೂ ದೃಢೀಕರಿಸುವುದರ ಜೊತೆಗೆ MIS ನಲ್ಲಿ ಸದರಿ ಮಾಹಿತಿಯನ್ನು ಭರ್ತಿ ಮಾಡುವುದು ಕಡ್ಡಾಯವಾಗಿರುತ್ತದೆ.
9. ಗ್ರಾಮ ಪಂಚಾಯತಿಯ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಇವರು ಕಾಮಗಾರಿಯನ್ನು ಹಂಚಿಕೆ ಮಾಡಿ ಸದರಿ ಕಾಮಗಾರಿಗೆ NMR ವಿತರಣೆ ಮಾಡುವ ಸಂದರ್ಭದಲ್ಲಿ ಕಡ್ಡಾಯವಾಗಿ ಸದರಿ ಕಾಮಗಾರಿಯ ಅನುಷ್ಠಾನಕ್ಕಾಗಿ ಬೇಕಾಗಿರುವ ಅನುದಾನವನ್ನು ಅನುಷ್ಠಾನ ಸಂಸ್ಥೆಗಳಿಗೆ ಜಿಲ್ಲಾ ಕಾರ್ಯಕ್ರಮ ಅಧಿಕಾರಿ/ಕಾರ್ಯಕ್ರಮ ಅಧಿಕಾರಿಗಳು ಬಿಡುಗಡೆ ಮಾಡತಕ್ಕದ್ದು ಮತ್ತು ಸದರಿ ಮಾಹಿತಿಯನ್ನು MIS ನಲ್ಲಿ ದಾಖಲಿಸತಕ್ಕದ್ದು (ತುರ್ತು ಸಂದರ್ಭಗಳಲ್ಲಿ ರಾಜ್ಯ ಸರ್ಕಾರವು ನೇರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಬಹುದಾಗಿರುತ್ತದೆ)
10. ಅನುಷ್ಠಾನ ಸಂಸ್ಥೆಗಳು ಬಿಡುಗಡೆ ಮಾಡುವ ಪೂರ್ಣ ಅನುದಾನದ ಸ್ವೀಕೃತಿ ಹಾಗೂ ಸದರಿ ಅನುದಾನದಲ್ಲಿ ಭರಿಸಲಾಗುವ ವೆಚ್ಚ ಇತ್ಯಾದಿ ಮಾಹಿತಿಯನ್ನು ತಮ್ಮ login ಮೂಲಕವೇ MIS ನಲ್ಲಿ ಭರ್ತಿ ಮಾಡತಕ್ಕದ್ದು.
11. ಕಾಮಗಾರಿ ಪೂರ್ಣಗೊಳಿಸಿದ ಸಂಬಂಧ ಸೂಕ್ತ ದೃಢೀಕರಣ ಹಾಗೂ ಕಾಮಗಾರಿ ಅನುಷ್ಠಾನದಲ್ಲಿ ನಿರ್ವಹಿಸಬೇಕಾದ ಪೂರ್ಣ ದಾಖಲಾತಿಗಳನ್ನು ಕಡ್ಡಾಯವಾಗಿ ಪ್ರತ್ಯೇಕ ಕಡತದಲ್ಲಿ ನಿರ್ವಹಿಸತಕ್ಕದ್ದು ಮತ್ತು ಯೋಜನಾ ಸಂಬಂಧ ಪರಿಶೀಲನೆಗಾಗಿ ಬರುವ ಅಧಿಕಾರಿಗಳಿಗೆ ತಪ್ಪದೇ ಸದರಿ ದಾಖಲಾತಿಗಳನ್ನು ಹಾಜರು ಪಡಿಸತಕ್ಕದ್ದು.
12. ಯೋಜನೆಯ ಅನುಷ್ಠಾನ ಸಂಬಂಧ ಆರ್ಥಿಕ ವರ್ಷ ಅಂತಿಮಗೊಂಡ ಕೂಡಲೇ Chartered Accountant ರವರಿಂದ ಆಡಿಟ್ ಮಾಡಿಸಿ ವರದಿಯನ್ನು ಸಂಬಂಧಪಟ್ಟ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಲ್ಲಿಸತಕ್ಕದ್ದು.
13. ಕೇಂದ್ರ/ರಾಜ್ಯ ಸರ್ಕಾರವು ಯೋಜನಾ ಅನುಷ್ಠಾನ ಸಂಬಂಧ ಕಾಲಕಾಲಕ್ಕೆ ಹೊರಡಿಸಲಾಗುವ ನಿರ್ದೇಶನ/ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 886

**ಎಸ್.ಎಸ್. ಪ್ರಸನ್ನಕುಮಾರ್**

ನಿರ್ದೇಶಕರು

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಗ್ರಾಅಪ 6ಎಸ್‌ಜಿವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 18–03–2011**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜಿವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 14–03–2011 ರ ಅನುಬಂಧದಲ್ಲಿ ಹಾಸನ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿದ್ದ ₹ 7,23,000 ಬದಲಿಗೆ ₹ 4,35,000 ಹಾಗೂ ಮಂಡ್ಯ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಿದ್ದ ₹ 9,76,000 ರ ಬದಲಿಗೆ ₹ 6,96,000 ಗಳನ್ನು ಎರಡನೇ ಕಂತಿನ ರಾಜ್ಯದ ಪಾಲಿನ ಡಿಆರ್‌ಡಿಎ ಆಡಳಿತ ಯೋಜನೆಯ ಅನುದಾನವಾಗಿ ಬಿಡುಗಡೆ ಮಾಡಲಾಗಿದೆಯೆಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ),
ಹಾಗೂ ಪ.ನಿ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. 887

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ ಬೆಂಗಳೂರು ಗ್ರಾಮಾಂತರ, ಕೊಡಗು, ಮೈಸೂರು, ಹಾಗೂ ತುಮಕೂರು ಜಿಲ್ಲೆಗಳಿಗೆ 2010–11ನೇ ಸಾಲಿನಲ್ಲಿ ಕೇಂದ್ರ ಹಾಗೂ ರಾಜ್ಯದ ಪಾಲಿನ ಪುನರ್ವಸತಿ ಸಹಾಯ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1 ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿ ಇವರ ಪತ್ರ ಸಂ:ಬಿಆರ್‌ಜಡ್‌ಪಿ/ಆರ್‌ಬಿಎಲ್.ಎಸ್‌ಜಿಎಸ್‌ವೈ01/2004–05 ದಿ: 27–07–2004
2 ಕೊಡಗು ಜಿಲ್ಲಾ ಪಂಚಾಯಿತಿ ಇವರ ಪತ್ರ ಸಂಖ್ಯೆ ಕೆ.ಜಿಪಿ ಡಿಇವಿ (3) 419/2003–04 ದಿ: 31–08–2004
3. ಮೈಸೂರು ಜಿಲ್ಲಾ ಪಂಚಾಯಿತಿ ಇವರ ದಿ: 24–03–2005ರ ಪತ್ರ ಸಂ: ಡಿ4/ಆರ್.ಬಿ.ಎಲ್/79/04–05 (176/03–04) ಹಾಗೂ ದಿನಾಂಕ: 31–12–2009ರ ಪತ್ರಸಂ:ಡಿ4/ಆರ್‌ಬಿಎಲ್/79/04–05/07–08
4. ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯಿತಿ ಇವರ ಸಂ: ಬಿ.ಆರ್.ಜಡ್ ಪಿ/ಡಿ.ಆರ್.ಡಿ.ಎ/ಆರ್‌ಬಿಎಲ್/17/05–06 ದಿ: 10–03–2006
5. ತುಮಕೂರು ಜಿಲ್ಲಾ ಪಂಚಾಯಿತಿ ಇವರ ಪತ್ರ ಸಂ: ಟಿಜಡ್‌ಪಿ/ಡಿಇವಿ/ಆರ್‌ಬಿಎಲ್/ಸಿಆರ್/1/04–05 ದಿ: 07–06–2006
6. ರಾಜ್ಯ ಸರ್ಕಾರವು ಕೇಂದ್ರ ಕಾರ್ಮಿಕ ಮಂತ್ರಾಲಯಕ್ಕೆ ದಿ: 12–01–2005, 20–05–2005, 26–09–2006 ಮತ್ತು 07–08–2010 ರಂದು ಸಲ್ಲಿಸಿರುವ ಪ್ರಸ್ತಾವನೆಗಳ ಪತ್ರ ಸಂ:ಆರ್‌ಡಿಪಿ/26/ಆರ್‌ಬಿಎಲ್/2000

**ಪ್ರಸ್ತಾವನೆ:**

ರಾಜ್ಯಾದ್ಯಂತ ಕೈಗೊಳ್ಳಲಾದ ಮರು ಸಮೀಕ್ಷೆಯಲ್ಲಿ ಬೆಂಗಳೂರು ಗ್ರಾಮಾಂತರ, ಕೊಡಗು, ಮೈಸೂರು ಹಾಗೂ ತುಮಕೂರು ಜಿಲ್ಲೆಗಳಲ್ಲಿ 2004–05, 2005–06 ಹಾಗೂ 2006–07ನೇ ಸಾಲುಗಳಲ್ಲಿ ಗುರುತಿಸಲ್ಪಟ್ಟ 61 ಜೀತದಾಳುಗಳನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ್ದು ಇವರುಗಳಿಗೆ ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್‌ವಸತಿ ಸಹಾಯಧನ ಕೋರಿ ಉಲ್ಲೇಖ (1) ರಿಂದ (5) ರವರೆಗೆ ಜಿಲ್ಲಾ ಪಂಚಾಯಿತಿಗಳು ಸಲ್ಲಿಸಿರುವ ಪ್ರಸ್ತಾವನೆಗಳನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಕೇಂದ್ರ ಕಾರ್ಮಿಕ ಮಂತ್ರಾಲಯಕ್ಕೆ ಉಲ್ಲೇಖ (6) ರ ಪತ್ರಗಳಲ್ಲಿ ವಿವಿಧ ದಿನಾಂಕಗಳಂದು ಸಲ್ಲಿಸಲಾಗಿರುತ್ತದೆ.

ಆದರೆ ಕೇಂದ್ರ ಸರ್ಕಾರವು ಪ್ರಸ್ತಾಪಿತ 61 ಜೀತವಿಮುಕ್ತರಿಗೆ ಕೇಂದ್ರದ ಪಾಲಿನ ಜೀತವಿಮುಕ್ತರ ಪುನರ್‌ವಸತಿ ಸಹಾಯಧನವನ್ನು ರಾಜ್ಯಕ್ಕೆ ಇದುವರೆವಿಗೂ ಬಿಡುಗಡೆಗೊಳಿಸಿರುವುದಿಲ್ಲ. ರಾಜ್ಯದ ಜೀತವಿಮುಕ್ತರಿಗೆ ಪುನರ್‌ವಸತಿ ಸಹಾಯಧನವನ್ನು ನಿಯಮಿತಕಾಲದೊಳಗಾಗಿ ಒದಗಿಸಬೇಕಾಗಿದ್ದು, ಆಡಳಿತಾತ್ಮಕ ಕಾರಣಗಳಿಂದಾಗಿ ಸ್ಥಗಿತಗೊಂಡಿರುತ್ತದೆ. ಕಾಲಕಾಲಕ್ಕೆ ಜೀತಪದ್ಧತಿಯಿಂದ ಬಿಡುಗಡೆಹೊಂದುವ ಜೀತವಿಮುಕ್ತರಿಗೆ, ಒದಗಿಸಬೇಕಾದ ಪುನರ್‌ವಸತಿ ಸಹಾಯಧನದ ಸೌಲಭ್ಯವನ್ನು ಕಲ್ಪಸದೇ ಇದ್ದಲ್ಲಿ ಇವರುಗಳು ಪುನಃ ಜೀತಗಾರಿಕೆಯ ಕಸುಬುಗೆ ಹಿಂದಿರುಗುವ ಸಂದರ್ಭಗಳು ಇದ್ದು, ಇವರ ಜೀವನಮಟ್ಟವು ಸುಧಾರಣೆಗೊಳ್ಳುವುದಿಲ್ಲ. ರಾಜ್ಯದಲ್ಲಿ ಜೀತ ಪದ್ಧತಿಯಿಂದ ಬಿಡುಗಡೆ ಹೊಂದಿರುವ ಜೀತವಿಮುಕ್ತರಿಗೆ ಪುನರ್‌ವಸತಿ ಸೌಲಭ್ಯವು ದೀರ್ಘ ಅವಧಿಯವರೆಗೆ ದೊರಕದಿರುವ ಬಗ್ಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಕರ್ನಾಟಕ ಮಾನವ ಹಕ್ಕುಗಳ ಆಯೋಗವು ಹಾಗೂ ಹಲವು ಸಕಾರೇತರ ಸಂಸ್ಥೆಗಳು ಗಮನಿಸಿದ್ದು, ಇದನ್ನು ಗಂಭೀರವಾಗಿ ಪರಿಗಣಿಸಿರುತ್ತದೆ. ಹಾಗೂ ಈ ಸಂಬಂಧ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿರವರು ಕೂಡ ಸದರಿ ಜೀತವಿಮುಕ್ತರಿಗೆ ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ ಪುನರ್‌ವಸತಿ ಸಹಾಯಧನವನ್ನು ಶೀಘ್ರವಾಗಿ ಒದಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ವೋಚ್ಚ ನ್ಯಾಯಾಲಯ ಹಾಗೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ನಿರ್ದೇಶನಗಳ ಹಿನ್ನೆಲೆಯಲ್ಲಿ ಜೀತವಿಮುಕ್ತರ ಪುನರ್‌ವಸತಿ ಕಾರ್ಯವನ್ನು ಆದ್ಯತೆ ಮೇರೆಗೆ ಪರಿಗಣಿಸಿ, ಶೀಘ್ರ ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಆದುದರಿಂದ ರಾಜ್ಯ ಸರ್ಕಾರವು 4 ಜಿಲ್ಲೆಗಳಿಗೆ ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್‌ವಸತಿ ಕಾರ್ಯ ಯೋಜನೆಯಡಿ ಕೇಂದ್ರದ ಪಾಲಿನ ಪುನರ್‌ವಸತಿ ಸಹಾಯಾನುದಾನವನ್ನು ನಿರೀಕ್ಷಿಸಿ, ರಾಜ್ಯದ ಅಯವ್ಯಯದಡಿ ಜೀತದಾಳುಗಳ ಪುನರ್‌ವಸತಿ ಯೋಜನೆಯ ಕಾರ್ಯಕ್ರಮಕ್ಕಾಗಿ ಲೆಕ್ಕಶೀರ್ಷಿಕೆ 2230–01–198–6–01 (ಯೋಜನೆ)

ಯಡಿ ಲಭ್ಯವಿರುವ ಅನುದಾನದಿಂದ ಕೇಂದ್ರ ಹಾಗೂ ರಾಜ್ಯದ ಪಾಲಿನ ಪುನರ್‌ವಸತಿ ಅನುದಾನವಾದ ರೂ. 12.20 ಲಕ್ಷಗಳನ್ನು (ಹನ್ನೆರಡು ಲಕ್ಷದ ಎಪ್ಪತ್ತು ಸಾವಿರ ಮಾತ್ರ) 61 ಜೀತವಿಮುಕ್ತರಿಗೆ (ಕೋಷ್ಟಕದಲ್ಲಿ ತೋರಿಸಿರುವಂತೆ) ಬಿಡುಗಡೆ ಮಾಡಲು ನಿರ್ಧರಿಸಿದೆ. ಅದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 1 ಆರ್‌ಬಿಎಲ್/2010, ಬೆಂಗಳೂರು, ದಿನಾಂಕ:11–03–2011**

1. ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್‌ವಸತಿ ಕಾರ್ಯ ಯೋಜನೆಯನ್ವಯ 2010–11ನೇ ಸಾಲಿನಲ್ಲಿ ಒಟ್ಟು 61 ಜೀತವಿಮುಕ್ತರಿಗೆ ಪುನರ್‌ವಸತಿ ಕಲ್ಪಿಸಲು ಕೇಂದ್ರದ ಪಾಲಿನ ಹಾಗೂ ರಾಜ್ಯದ ಪಾಲಿನ (50:50 ಅನುಪಾತದಲ್ಲಿ) ಒಟ್ಟು ರೂ. 12.20 ಲಕ್ಷಗಳನ್ನು (ಹನ್ನೆರಡು ಲಕ್ಷದ ಇಪ್ಪತ್ತು ಸಾವಿರ ಮಾತ್ರ) ಕೆಳಕಂಡ ಕೋಷ್ಟಕದಂತೆ ಬೆಂಗಳೂರು ಗ್ರಾಮಾಂತರ, ಕೊಡಗು, ಮೈಸೂರು ಹಾಗೂ ತುಮಕೂರು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಅವರ ಬೇಡಿಕೆ ಅನುಸಾರ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.
2. ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230– ಕಾರ್ಮಿಕ ಮತ್ತು ಉದ್ಯೋಗ –01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ –6– ಗ್ರಾಮ ಪಂಚಾಯಿತಿಗಳು– ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01– ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

**ಕೋಷ್ಟಕ**

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿಲ್ಲಾ ಪಂಚಾಯಿತಿಯ ಪ್ರಸ್ತಾವನೆ ದಿನಾಂಕ ಹಾಗೂ ಜೀತವಿಮುಕ್ತರ ಸಂಖ್ಯೆ | ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್‌ವಸತಿ ಕಾರ್ಯ ಯೋಜನೆಯಡಿ ಬಿಡುಗಡೆ ಮಾಡುತ್ತಿರುವ ಪುನರ್‌ವಸತಿ ಸಹಾಯಧನ | | |
|---|---|---|---|---|---|
| | | | ಕೇಂದ್ರ ಪಾಲು (ಲಕ್ಷ ರೂ.ಗಳಲ್ಲಿ) | ರಾಜ್ಯದ ಪಾಲು (ಲಕ್ಷ ರೂ.ಗಳಲ್ಲಿ) | ಒಟ್ಟು ಲಕ್ಷ ರೂ.ಗಳಲ್ಲಿ |
| 1. | ಬೆಂಗಳೂರು ಗ್ರಾಮಾಂತರ | i) ದಿ: 27–07–2004 – 03<br>ii) ದಿ: 10–03–2006 – 22 | 2.50 | 2.50 | 5.00 |
| 2. | ಕೊಡಗು | i) ದಿ: 31–08–2004 – 01 | 0.10 | 0.10 | 0.20 |
| 3. | ಮೈಸೂರು | i) ದಿ: 24–03–2005 – 21<br>ii) ದಿ: 31–12–2009 – 10 | 3.10 | 3.10 | 6.20 |
| 4. | ತುಮಕೂರು | i) ದಿ: 07–06–2006 – 04 | 0.40 | 0.40 | 0.80 |
| | **ಒಟ್ಟು** | **61** | **6.10** | **6.10** | **12.20** |

ಈ ಆದೇಶದಲ್ಲಿ ಬಿಡುಗಡೆಗೊಳಿಸಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಜೀತವಿಮುಕ್ತರಿಗೆ ಪುನರ್‌ವಸತಿ ಕಲ್ಪಿಸುವ ಉದ್ದೇಶಕ್ಕೆ ಮಾತ್ರ ಬಳಸಿಕೊಳ್ಳಲು ಅನುಮತಿಸಲಾಗಿದೆ.

1. ಕೋಷ್ಟಕದಲ್ಲಿನ ಜೀತವಿಮುಕ್ತರು ಈ ಹಿಂದೆ ಜೀತದಾಳುಗಳಾಗಿದ್ದರು ಹಾಗೂ ಅವರನ್ನು ಜೀತಕ್ಕಿರಿಸಿಕೊಂಡಿದ್ದ ಮಾಲೀಕರನ್ನು ಪಿರ್ಯಾದು ಮಾಡಲು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತೆಂಬ ಬಗ್ಗೆ ದೃಢೀಕರಣವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಪಡೆದುಕೊಂಡ ನಂತರವೇ ಸದರಿ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜೀತವಿಮುಕ್ತರಿಗೆ ಪುನರ್‌ವಸತಿ ಕಲ್ಪಿಸುವುದು.
2. ರಾಜ್ಯ ಸರ್ಕಾರದ ದಿನಾಂಕ: 11–10–2001 ಹಾಗೂ 15–10–2001ರ ಅರೆ ಸರ್ಕಾರಿ ಪತ್ರ:ಸಂ.ಆರ್‌ಡಿಪಿ. 26.ಆರ್‌ಬಿಎಲ್ 2000ರೊಂದಿಗೆ ಕ್ರಮವಾಗಿ ಎಲ್ಲಾ ಜಿಲ್ಲಾಧಿಕಾರಿಗಳಿಗೂ ಹಾಗೇ ಎಲ್ಲಾ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೂ ಕಳುಹಿಸಿರುವ ಕೇಂದ್ರ ಸರ್ಕಾರದ ದಿ: 8—8–2000 ರ ಆದೇಶ ಸಂ.ಆರ್–11011/02/08–ಬಿಎಲ್ ರಲ್ಲಿ ಸೂಚಿಸಿರುವ ಮಾರ್ಗಸೂಚಿಗಳ ಅನುಸಾರ ಪುನರ್‌ವಸತಿ ಧನವನ್ನು ವೆಚ್ಚ ಮಾಡತಕ್ಕದ್ದು.
3. ಭಾರತದ ಕಂಟ್ರೋಲರ್ ಮತ್ತು ಮಹಾಲೇಖಪಾಲರು ಇಚ್ಛೆಪಟ್ಟಲ್ಲಿ ಟೆಸ್ಟ್ ಚೆಕ್‌ಗೆ ಒದಗಿಸಲು ಪ್ರತಿ ಯೋಜನೆವಾರು ವೆಚ್ಚದ ಲೆಕ್ಕಪತ್ರಗಳನ್ನು ಸದರಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ನಿರ್ವಹಿಸತಕ್ಕದ್ದು.
4. 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನ) ಕಾಯ್ದೆ ಹಾಗೂ ಅದರಡಿ ರೂಪಿಸಿರುವ ನಿಯಮಗಳಂತೆ ಗುರುತಿಸಿ ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಜೀತವಿಮುಕ್ತರಿಗೆ ಮಾತ್ರ ಈ ಯೋಜನೆಯಡಿ ಸಹಾಯ ಸೌಲಭ್ಯಗಳನ್ನು ಕಲ್ಪಿಸತಕ್ಕದ್ದು.
5. ತಮ್ಮ ಜಿಲ್ಲೆಯಲ್ಲಿ ಜೀತಪದ್ಧತಿಯಿಂದ ಬಿಡುಗಡೆ ಹೊಂದಿರುವ ಜೀತವಿಮುಕ್ತರು ಹೊಸ ಜಿಲ್ಲೆಯ ವಿಂಗಡನೆಯ ನಂತರ ಸದರಿ ಜಿಲ್ಲೆಗೆ ವರ್ಗಾವಣೆ ಗೊಂಡಲ್ಲಿ, ಈ ಆದೇಶದಲ್ಲಿ ಬಿಡುಗಡೆಗೊಳಿಸಿರುವ ಅನುದಾನವನ್ನು ಸಂಬಂಧಪಟ್ಟ ಜೀತವಿಮುಕ್ತರಿಗೆ ಒದಗಿಸುವ ಜವಾಬ್ದಾರಿಯು ನಿಮ್ಮದಾಗಿದ್ದು ಸದರಿ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ನಿಮ್ಮ ಜಿಲ್ಲೆಯಿಂದಲೇ ಸರ್ಕಾರಕ್ಕೆ ಒದಗಿಸತಕ್ಕದ್ದು.
6. ವೆಚ್ಚ ಮಾಡಲಾದ ಅನುದಾನಕ್ಕೆ ಹಣಬಳಕೆ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಲಾದ ತ:ಖ್ತೆಗಳನ್ನು ಸರ್ಕಾರಕ್ಕೆ ಬಿಡುಗಡೆಯಾದ 15 ದಿನಗಳೊಳಗಾಗಿ ತಪ್ಪದೇ ಕಳುಹಿಸತಕ್ಕದ್ದು. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಪ್ರತಿ ಮಾಹೆಯೂ ಭೌತಿಕ ಹಾಗೂ

ಆರ್ಥಿಕ ಪ್ರಗತಿ ವರದಿಗಳನ್ನು ನಿಯತಕಾಲಿಕವಾಗಿ ತಪ್ಪದೇ ನಿರ್ದೇಶಕರು, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ಕಳುಹಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ:ಗ್ರಾಅಪ/36/ಪಿಬಿಎಸ್/2011 ದಿನಾಂಕ: 11–03–2011ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಎಸ್. ಪ್ರಸನ್ನಕುಮಾರ್**
ನಿರ್ದೇಶಕರು
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. 888

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ದಿನಾಂಕ: 12–13–ನೇ ಜನವರಿ 2011ರಲ್ಲಿ ಗುಜರಾತ್ ರಾಜ್ಯದಲ್ಲಿ ನಡೆದ 5th Vibrant Gujarat Summit ಸಂಬಂಧ ಪಬ್ಲಿಸಿಟಿ ಮತ್ತು ಪ್ರಾಪಗಾಂಡಕ್ಕಾಗಿ ಜಾಹೀರಾತು ನೀಡಿದ ಬಾಬ್ತು ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಎಂಎಸ್ಎಂಇ/ಕೈವಿಅ/ಕುಮಿ/ಅನುದಾನ/2010–11 ದಿನಾಂಕ: 17.01.2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ ಪತ್ರದಲ್ಲಿ, ದಿನಾಂಕ 12–13 ಜನವರಿ 2011ರಲ್ಲಿ ಗುಜರಾತ್ ರಾಜ್ಯದಲ್ಲಿ ನಡೆದ 5th Vibrant Gujarat Summit ಸಂಬಂಧ 2010–11ನೇ ಸಾಲಿನಲ್ಲಿ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶದ ನಂತರ ಪಬ್ಲಿಸಿಟಿ ಮತ್ತು ಪ್ರಾಪಗಾಂಡ ಸಲುವಾಗಿ ಗುಜರಾತ್, ಮಹಾರಾಷ್ಟ್ರ, ರಾಜಾಸ್ಥಾನ, ಮಧ್ಯಪ್ರದೇಶ ರಾಜ್ಯಗಳಲ್ಲಿ ಪ್ರಚಾರದಲ್ಲಿರುವ ಪತ್ರಿಕೆಗಳಲ್ಲಿ ಜಾಹೀರಾತು ನೀಡಿರುವ ಸಂಬಂಧ ವೆಚ್ಚ ಭರಿಸಲು ರೂ. 20.00 ಲಕ್ಷಗಳ (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಅವಶ್ಯಕತೆ ಇದೆ. ಈ ಮೊತ್ತವನ್ನು ಕರ್ನಾಟಕ ಉದ್ಯೋಗ ಮಿತ್ರ ರವರಿಗೆ ಬಿಡುಗಡೆ ಮಾಡಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರರವರು ಪ್ರಸ್ತಾಪಿಸಿರುತ್ತಾರೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"**2851–00–102–0–69**"** ರಡಿ ಭರಿಸುವುದಾಗಿ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 506 ಎಸ್‌ಪಿಐ 2010, ಬೆಂಗಳೂರು, ದಿನಾಂಕ 25.03.2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ರವರಿಗೆ ದಿನಾಂಕ: 12–13ನೇ ಜನವರಿ 2011ರಲ್ಲಿ ನಡೆದ Vibrant Gujarat Summit ಸಂಬಂಧ ಗುಜರಾತ್, ಮಹಾರಾಷ್ಟ್ರ, ರಾಜಾಸ್ಥಾನ, ಮಧ್ಯಪ್ರದೇಶ ರಾಜ್ಯಗಳಲ್ಲಿ ಪ್ರಚಾರದಲ್ಲಿರುವ ಪತ್ರಿಕೆಗಳಲ್ಲಿ ಜಾಹಿರಾತು ನೀಡಿದ ಸಂಬಂಧ ರೂ. 20.00 ಲಕ್ಷಗಳನ್ನು (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"**2851–00–102–0–69 – Modernisation/Technology Training (Plan)"-2010-11 (ಯೋಜನೆ)ರಡಿ ಭರಿಸತಕ್ಕದ್ದು.

ಮೇಲ್ಕಂಡ ಮೊತ್ತವನ್ನು ಕರ್ನಾಟಕ ಉದ್ಯೋಗ ಮಿತ್ರದ ವ್ಯವಸ್ಥಾಪಕ ನಿರ್ದೇಶಕರವರು ಸಲ್ಲಿಸುವ ಸ್ವೀಕೃತ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 482 ವೆಚ್ಚ–1/2011, ದಿನಾಂಕ: 23.03.2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 889

## COMMERCE AND INDUSTRIES SECRETARIAT

**Sub :** Transfer of approval sanctioned to M/s. Bharatiya Reserve Bank Note Mudran Pvt. Ltd., to establish a "Currency Note Paper of 12,000 TPA Capacity" at Mudran Nagar, Mysore District. reg.

**Read :**
1. Govt. Order No: CI 197 SPI 2010, dated 02.06.2010.
2. Proceedings of the 24th State High Level Clearance Committee (SHLCC) Meeting held on 24.01.2011.

**Preamble :**

M/s. Bharatiya Reserve Bank Note Mudran Pvt. Ltd., has been accorded approval to establish a "Currency Note Paper" unit at Mudran Nagar, Mysore District, with an investment of Rs. 1180 crores, generating employment to about 496 persons.

Now, they have proposed to transfer approval to M/s. Bank Note Paper Mill Inida Pvt. Ltd., as per the instructions of GoI.

In the 24th State High Level Clearance Committee (SHLCC) Meeting held on 24.01.2011, the proposal of the Company was discussed and approved.

Government has examined the recommendations made by the State High Level Clearance Committee in its 24th Meeting held on 24.01.2011, in all aspects.

Hence the following order.

**Government Order No: CI 197 SPI 2010 BANGALORE, DATED : 23-03-2011**

Government is pleased to transfer the approval given to M/s. Bharatiya Reserve Bank Note Mudran Pvt. Ltd., vide G.O read at (1) above, to M/s. Bank Note Paper Mill India Pvt. Ltd.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce & Industries Department.

P.R. 890

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ವಾಣಿವಿಲಾಸ, ಕರ್ನಾಟಕ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆಗಳು ಪಡೆದ ಸಾಲದ ಮರುಪಾವತಿ ಬಗ್ಗೆ.

**ಓದಲಾಗಿದೆ :**
1) ದಿ: 6–12–2000ರ ಸಿಎಂಡಬ್ಲ್ಯೂ 248 ಸಸಕಾ 2000ನೇ ಸಂಖ್ಯೆಯ ಸರ್ಕಾರದ ಆದೇಶ.
2) ದಿ: 6–12–2000ರ ಸಿಎಂಡಬ್ಲ್ಯೂ 241 ಸಸಕಾ 2001ನೇ ಸಂಖ್ಯೆಯ ಸರ್ಕಾರದ ಆದೇಶ.
3) ದಿ: 26–04–2002ರ ಸಿಎಂಡಬ್ಲ್ಯೂ 253 ಸಸಕಾ 2001ನೇ ಸಂಖ್ಯೆಯ ಸರ್ಕಾರದ ಆದೇಶ.
4) ದಿ: 9–3–2009ರ ವ್ಯನಿ/ಅಕ್ರಯೋ/10928/2008–09ನೇ ಸಂಖ್ಯೆಯ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ.
5) ದಿ: 13–07–2010ರ ಆ/ಅಬ್ಯಾಂ/2010–11ನೇ ಸಂಖ್ಯೆಯ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತದ ಅಧ್ಯಕ್ಷರ ಪತ್ರ.
6) ದಿ: 18–10–2010ರಂದು ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
7) ದಿ: 27–1–2011ರ ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕ್ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ವ್ಯನಿ/ಲೆನಿ–ಸಕ್ಕರೆ/2010–11/8691ನೇ ಸಂಖ್ಯೆಯ ಪತ್ರ.
8) ದಿ: 22–2–2011ರ ಕರ್ನಾಟಕ ರಾಜ್ಯ ಅಪೆಕ್ಸ್ ಬ್ಯಾಂಕ್ ನಿಯಮಿತದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಮುಕಾ/ಲೆನಿ/2010–11ನೇ ಸಂಖ್ಯೆಯ ಪತ್ರ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತವು (ಸಂಕ್ಷಿಪ್ತವಾಗಿ 'ಅಪೆಕ್ಸ್ ಬ್ಯಾಂಕ್') ರಾಜ್ಯದ ಎಂಟು ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಸರ್ಕಾರದ ಖಾತರಿ ಮೇಲೆ ಸಾಲಗಳನ್ನು ನೀಡಿದ್ದು, ಸದರಿ ಕಾರ್ಖಾನೆಗಳು ಸಾಲಗಳನ್ನು ಮರುಪಾವತಿಸದೇ ಇರುವುದರಿಂದ ಅಪೆಕ್ಸ್ ಬ್ಯಾಂಕ್ ಸರ್ಕಾರದ ಖಾತರಿಯನ್ನು ಇನ್‌ವೋಕ್ ಮಾಡಿ ಕಾರ್ಖಾನೆಗಳಿಂದ ಬಾಕಿಯಿರುವ ಸಾಲ ಮತ್ತು ಬಡ್ಡಿಯನ್ನು ಪಾವತಿಸುವಂತೆ ಸರ್ಕಾರವನ್ನು ಕೋರಿ ಬ್ಯಾಂಕಿನ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು ದಿ: 9–3–2009 ರಂದು ಮತ್ತು 13–7–2010 ರಂದು ಪತ್ರಗಳನ್ನು ಬರೆದಿರುತ್ತಾರೆ.

ಈ ಹಿಂದೆ ದಿ: 6–12–2000, 6–12–2000 ಮತ್ತು 26–4–2002ರ ಆದೇಶಗಳ ಮೂಲಕ (ಉಲ್ಲೇಖ 1 ರಿಂದ 3), ಕ್ರಮವಾಗಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಮತ್ತು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಗಳಿಗೆ (ಸಂಕ್ಷಿಪ್ತವಾಗಿ "ಸಹಕಾರಿ ಸಕ್ಕರೆ ಕಾರ್ಖಾನೆಗಳು") ಅಪೆಕ್ಸ್ ಬ್ಯಾಂಕ್ ಮತ್ತು ಇತರೆ ಬ್ಯಾಂಕುಗಳಿಂದ ಸಾಲ ಪಡೆಯಲು ಸರ್ಕಾರದ ಖಾತರಿಯನ್ನು ನೀಡಲಾಗಿರುತ್ತದೆ.

ಅಪೆಕ್ಸ್ ಬ್ಯಾಂಕ್ ಸಹಕಾರಿ ಸಕ್ಕರೆ ಕಾರ್ಖಾನೆಗಳಿಂದ ಬಾಕಿಯಿರುವ ಸಾಲದ ವಸೂಲಾತಿಗಾಗಿ ಸರ್ಕಾರಿ ಖಾತರಿಯನ್ನು ಇನ್‌ವೋಕ್ ಮಾಡಿದ್ದು, ಈ ಬಗ್ಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷರು, ವ್ಯವಸ್ಥಾಪಕ ನಿರ್ದೇಶಕರು ಮತ್ತು ಇತರೆ ಅಧಿಕಾರಿಗಳೊಂದಿಗೆ ಸರ್ಕಾರದ ಮಟ್ಟದಲ್ಲಿ ಚರ್ಚಿಸಲಾಗಿರುತ್ತದೆ. ಬ್ಯಾಂಕ್‌ನ ವ್ಯವಸ್ಥಾಪಕ ನಿರ್ದೇಶಕರು ದಿ: 27–01–2011 (ಉಲ್ಲೇಖ–7)ರ ಪತ್ರದಲ್ಲಿ ದಿನಾಂಕ 31–01–2011ರ ಅಂತ್ಯಕ್ಕೆ ಸಹಕಾರಿ ಸಕ್ಕರೆ ಕಾರ್ಖಾನೆಗಳು ಬ್ಯಾಂಕಿನಿಂದ ಬಾಕಿಯಿರುವ ಅಸಲು ₹1874.65 ಲಕ್ಷ ಮತ್ತು ಬಡ್ಡಿ ₹619.14 ಲಕ್ಷ ಒಟ್ಟು ₹2493.79 ಲಕ್ಷಗಳ ಮೊತ್ತವನ್ನು ಕೋರಿದ್ದು, ಏಕಕಾಲಿಕ ತೀರುವಳಿ ಯೋಜನೆ ಪ್ರಕಾರ ಸರ್ಕಾರವು ಅಸಲು ₹1874.65 ಲಕ್ಷ ಮತ್ತು ಬಡ್ಡಿ ₹608.79 ಲಕ್ಷ ಒಟ್ಟು ₹2483.44 ಲಕ್ಷಗಳನ್ನು ಕೆಳಕಂಡಂತೆ ಮರುಪಾವತಿಸಲು ಒಪ್ಪಿರುತ್ತದೆ.

ಕೋಷ್ಟಕ–1 (ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆ ಹೆಸರು | ಅಸಲು | ಬಡ್ಡಿ (ಶೇ. 6.5 ರಂತೆ) | ಒಟ್ಟು |
|---|---|---|---|---|
| 1 | ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ | 447.05 | 174.43 | 621.48 |
| 2 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ | 904.01 | 323.59 | 1227.60 |
| 3 | ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ | 523.59 | 110.77 | 634.36 |
| ಒಟ್ಟು | | 1874.65 | 608.79 | 2483.44 |

ಮುಂದುವರೆದು ದಿ: 22–02–2011ರಂದು (ಉಲ್ಲೇಖ–8) ಮತ್ತೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಪತ್ರ ಬರೆದು ಈ ಮೊತ್ತವನ್ನು ಬ್ಯಾಂಕಿಗೆ ಪಾವತಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 94 ಸಸಕಾ 2008, ಬೆಂಗಳೂರು, ದಿನಾಂಕ: 24.03.2011**

ಕೆಳಗೆ ವಿವರಿಸಿರುವ ಮೂರು ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ₹2483.44 ಲಕ್ಷ ಸಾಲವನ್ನು ಮಂಜೂರು ಮಾಡಲಾಗಿದೆ.

ಕೋಷ್ಟಕ–2 (ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾರ್ಖಾನೆ ಹೆಸರು | ಒಟ್ಟು | ಲೆಕ್ಕ ಶೀರ್ಷಿಕೆ |
|---|---|---|---|
| 1 | ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ | 621.48 | 6860–04–101–0–03 |
| 2 | ಕರ್ನಾಟಕ ಸಹಕಾರಿ ಸಕ್ಕರೆ ಕಾರ್ಖಾನೆ | 1227.60 | 6425–00–108–5–07 |
| 3 | ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ | 634.36 | 6860–04–101–0–10 |
| ಒಟ್ಟು | | 2483.44 | |

ಈ ಮೊತ್ತವನ್ನು ಅಪೆಕ್ಸ್ ಬ್ಯಾಂಕ್ ಏಕಕಾಲಿಕ ತೀರುವಳಿ ಯೋಜನೆಯನ್ವಯ ಪ್ರಸ್ತಾಪಿಸಿರುವಂತೆ ಮೂರು ಸಹಕಾರಿ ಸಕ್ಕರೆ ಕಾರ್ಖಾನೆಗಳಿಂದ ಬರಬೇಕಾದ ತಮ್ಮ ಬಾಕಿಯನ್ನು ಪೂರ್ಣ ಪ್ರಮಾಣದಲ್ಲಿ ಇತ್ಯರ್ಥವಾಗಿರುವಂತೆ ಉಪಯೋಗಿಸಿಕೊಳ್ಳತಕ್ಕದ್ದು. ಈ ಸಾಲಕ್ಕೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳನ್ನು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಪ್ರತ್ಯೇಕವಾಗಿ ಹೊರಡಿಸುವುದು.

ಮೇಲೆ ತಿಳಿಸಿದ ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಸಾಲವನ್ನು ನಗದಾಗಿ ಬಿಡುಗಡೆ ಮಾಡುವ ಬದಲು, ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಕಛೇರಿಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರು, ಹಣ ಸಂದಾಯ ಸ್ವೀಕೃತಿಯ ಮೇಲೆ ಕಬ್ಬು ಅಭಿವೃದ್ಧಿ ಆಯುಕ್ತರ ಮೇಲು ರುಜುವಿನೊಂದಿಗೆ ಕೋಷ್ಟಕ–2 ರಲ್ಲಿ ತಿಳಿಸಿರುವ ಲೆಕ್ಕ ಶೀರ್ಷಿಕೆಯಡಿ ಹಣವನ್ನು ಖಜಾನೆಯಿಂದ ಸೆಳೆದು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿಯಮಿತಕ್ಕೆ ನೇರವಾಗಿ ಪಾವತಿಸತಕ್ಕದ್ದು.

ಕೋಷ್ಟಕ–2 ರಲ್ಲಿನ ವಿವರಣೆಯಂತೆ, ಮೂರು ಸಹಕಾರಿ ಸಕ್ಕರೆ ಕಾರ್ಖಾನೆಗಳು ಪಡೆದಿರುವ ಸಾಲಗಳಿಗೆ ಲೆಕ್ಕವಿಡುವಂತೆ ಪ್ರಧಾನ ಮಹಾಲೇಖಪಾಲರು (ಎ ಮತ್ತು ಇ) ರವರನ್ನು ಕೋರಲಾಗಿದೆ.

ಈ ಆದೇಶವನ್ನು ದಿ: 5–2–2011ರ ಎಫ್‌ಡಿ 476 ವೆಚ್ಚ–2/2010ನೇ ಸಂಖ್ಯೆಯ ಅನಧಿಕೃತ ಟಿಪ್ಪಣಿ ಮತ್ತು ದಿನಾಂಕ 24–03–2011ರ ಆಇ 476 ವೆಚ್ಚ–2/10ನೇ ಸಂಖ್ಯೆ ಅನಧಿಕೃತ ಟಿಪ್ಪಣಿ ಮೂಲಕ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಪಿ.ಆರ್. 891

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸಹಕಾರಿ ಸಕ್ಕರೆ)

## DEPARTMENT OF PERSONNEL AND ADMINISTRATIVE REFORMS SECRETARIAT

**Sub :** Writing of Performance Appraisal Report – Determination of Authorities – reg.

**Read :**
1. DPAR 100/SFP/85, Dated: 06-10-1988.
2. DPAR 112/SFP/99, Dated: 27-01-2000.
3. AIS PAR Rules 2007.
4. Letter No. PS-2/IFS/CR/35/2001-02, Dated: 15/10/2010 from PCCF.

**Preamble :**

In the Government Orders read above issued from time to time, the State Government had prescribed Reporting, Reviewing and Accepting Authorities under AIS (CR) Rules, in respect of IFS officers of Karnataka Cadre. The AIS (CR) Rules, 1970 have been repealed and the new AIS (PAR) Rules, 2007 have come into force for the Reporting year 2007-2008 (ending 31.3.2008) and onwards. In view of several additions, deletions of posts in the recent past and also in view of coming into force of new AIS (PAR) Rules, 2007, it has been considered necessary to issue a comprehensive Government Order prescribing Reporting, Reviewing and Accepting Authorities for all the posts held by IFS officers in Forest Department and also in non-forest organisations for the Reporting year 2010-11 (ending 31.3.2011) and onwards. The proposals of Principal Chief Conservator of Forests and Principal Secretary to Government. Forest Ecology and Environment Department have been formally discussed in the meeting held in the Chambers of Chief Secretary to Government on 09-08-2010. After detailed discussions, it has been decided to prescribe the authorities for initiating, Reporting/Reviewing and Accepting the PARs of IFS officers under new AIS (PAR) Rules 2007 for the Reporting year 2009-10, as per the Annexure to this order.

**Government Order No: DPAR 73 SFP 2003, BANGALORE, DATED : 18-03-2011**

In exercise of powers conferred u/r 5(1) of AIS (PAR) Rules, 2007 and in supersession of the earlier Government orders issued in the matter, the State Government hereby prescribe the Reporting, Reviewing and Accepting Authorities in

